

# ಕನ್ನಡ ವಿಶ್ವವಿದ್ಯಾಲಯ
## ಹಂಪಿ

೨೦೧೨–೧೩ನೇ ಸಾಲಿನ ಎಂ.ಫಿಲ್. ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಶಿಳ್ಳೇಕ್ಯಾತ ಜನಾಂಗದ ಒಂದು ಸಂಕ್ಷಿಪ್ತ ಅಧ್ಯಯನ


ನಿಬಂಧಕಾರರು

**ಜಗದೇವಿ**

ನೋಂದಣಿ ಸಂಖ್ಯೆ : KVTMKS - 00607

ಕನ್ನಡ ಎಂ.ಫಿಲ್ ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ.)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಹೆಚ್.ಪಿ.ಗೀತಾ

ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ,

ಸರ್ಕಾರಿ ಪ್ರಥಮ ದರ್ಜೆ ಕಾಲೇಜು

ಕುವೆಂಪುನಗರ, ಮೈಸೂರು – ೫೭೦ ೦೨೩





ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು

೨೦೧೨–೧೩

1061



# ಕನ್ನಡ ವಿಶ್ವವಿದ್ಯಾಲಯ
# ಹಂಪಿ

೨೦೧೨-೧೩ನೇ ಸಾಲಿನ ಎಂ.ಫಿಲ್. ಪದವಿಯ ಪರೀಕ್ಷೆಗೆ ಸಂಬಂಧಿಸಿದಂತೆ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಸಂಶೋಧನಾ ನಿಬಂಧ

# ಶಿಳ್ಳೇಕ್ಯಾತ ಜನಾಂಗದ ಒಂದು ಸಂಕ್ಷಿಪ್ತ ಅಧ್ಯಯನ


ನಿಬಂಧಕಾರರು

**ಜಗದೇವಿ**

ನೋಂದಣಿ ಸಂಖ್ಯೆ : KVTMKS - 00607

ಕನ್ನಡ ಎಂ.ಫಿಲ್ ವಿದ್ಯಾರ್ಥಿನಿ (ಹಂಪಿ, ಕ.ವಿ.ವಿ.)

ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಜಯಲಕ್ಷ್ಮೀಪುರಂ, ಮೈಸೂರು

ಮಾರ್ಗದರ್ಶಕರು

ಡಾ. ಹೆಚ್.ಪಿ.ಗೀತಾ
ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ,
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕುವೆಂಪುನಗರ, ಮೈಸೂರು – ೫೭೦ ೦೨೩

ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು


೨೦೧೨-೧೩

# <u>ದೃಢೀಕರಣ ಪ್ರಮಾಣಪತ್ರ</u>

೨೦೧೨-೧೩ನೇ ಸಾಲಿನಲ್ಲಿ ಕ್ರಮಸಂಖ್ಯೆ KVTMKS-00607ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ವಿದ್ಯಾರ್ಥಿನಿಯಾದ **ಜಗದೇವಿ** ಅವರು ನನ್ನ ಮಾರ್ಗದರ್ಶನದಲ್ಲಿ **"ಶಿಳ್ಳೇಕ್ಯಾತ ಜನಾಂಗದ ಒಂದು ಸಂಕ್ಷಿಪ್ತ ಅಧ್ಯಯನ"** ಎಂಬ ಶೀರ್ಷಿಕೆಯ ನಿಬಂಧವನ್ನು ಎಂ.ಫಿಲ್. ಪದವಿಗಾಗಿ ರಚಿಸಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮಾ ಅಥವಾ ತತ್ಸಮಾನ ಪದವಿಗಳಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಸಲ್ಲಿಸಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಮೈಸೂರು
ದಿನಾಂಕ: ೨೨-೦೭-೨೦೧೩

**(ಡಾ. ಹೆಚ್.ಪಿ.ಗೀತಾ)**
**ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ,**
**ಸರ್ಕಾರಿ ಪ್ರಥಮ ದರ್ಜೆ ಕಾಲೇಜು**
**ಕುವೆಂಪುನಗರ, ಮೈಸೂರು - ೫೭೦ ೦೨೩**

ಡಾ. ಎಚ್.ಪಿ. ಗೀತಾ
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಕುವೆಂಪುನಗರ, ಮೈಸೂರು-23.

# ಅಭ್ಯರ್ಥಿಯ ಘೋಷಣಾ ಪತ್ರ

**"ಶಿಳ್ಳೇಕ್ಯಾತ ಜನಾಂಗದ ಒಂದು ಸಂಕ್ಷಿಪ್ತ ಅಧ್ಯಯನ"** ಎಂಬ ಶೀರ್ಷಿಕೆಯ ಈ ನಿಬಂಧವನ್ನು ಕನ್ನಡ ಎಂ.ಫಿಲ್ ಪದವಿಯ ಕ್ರಮಸಂಖ್ಯೆ KVTMKS - 00607 ವಿದ್ಯಾರ್ಥಿನಿ ಆದ ನಾನು ೨೦೧೨-೧೩ನೇ ಸಾಲಿನ ಪರೀಕ್ಷೆಗಾಗಿ **ಡಾ. ಹೆಚ್.ಪಿ.ಗೀತಾ, ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕುವೆಂಪುನಗರ, ಮೈಸೂರು – ೫೭೦ ೦೨೩** ಇವರ ಸೂಕ್ತ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ನಿಬಂಧವನ್ನು ಈ ಹಿಂದೆ ಈ ವಿಶ್ವವಿದ್ಯಾಲಯಕ್ಕೆ ಅಥವಾ ಬೇರೆ ವಿಶ್ವವಿದ್ಯಾನಿಲಯಗಳ ಪದವಿ, ಡಿಪ್ಲೊಮೊ ಅಥವಾ ಯಾವುದೇ ಪರೀಕ್ಷೆಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ಮೈಸೂರು

ದಿನಾಂಕ: ೨೨-೦೭-೨೦೧೩

(ಜಗದೇವಿ)

೨೦೧೨-೧೩ನೇ ಸಾಲಿನ ಎಂ.ಫಿಲ್ ವಿದ್ಯಾರ್ಥಿ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು.

# ಶಿಳ್ಳೇಕ್ಯಾತ ಜನಾಂಗದ ಒಂದು ಸಂಕ್ಷಿಪ್ತ ಅಧ್ಯಯನ

## ಪ ರಿ ವಿ ಡಿ



*****

# ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

## ಪ್ರಸ್ತಾವನೆ

ಹದಿನಾರನೆಯ ಶತಮಾನವು ದೇಶದ ಚರಿತ್ರೆಯಲ್ಲಿ ವಿಶೇಷವಾಗಿ ನಮ್ಮ ಕನ್ನಡ ನೆಲದ ಚರಿತ್ರೆಯಲ್ಲಿ ಬಹಳ ಮುಖ್ಯವಾದ ಕಾಲಘಟ್ಟ. ಕಾರಣ ಈ ಅವಧಿಯಲ್ಲಿ ಜನಪದ ಸಾಹಿತ್ಯ ಉಗಮದ ಮೇರುಘಟ್ಟ, ಜನರ ಜೀವನದ ರೀತಿನೀತಿಗಳು, ಆಚಾರ-ವಿಚಾರಗಳು ಸಂಪ್ರದಾಯ ನಂಬಿಕೆಗಳು ಹಾಗೂ ಸಂಸ್ಕೃತಿಯು ಒಮದು ತಲೆಮಾರಿನಿಂದ ಮತ್ತೊಂದು ತಲೆಮಾರಿಗೆ ಸಾಗಿ ಬರುವ ಕಾರ್ಯ ಆರಂಭವಾದ ಒಂದು ಘಟ್ಟ. ಈ ಅವಧಿಯಲ್ಲಿ ಪುರಾಣಗಳು, ಎಲೆ ಹೂಗಳು ಜಾನಪದ ಕಥೆಗಳು, ಜಾನಪದ ನೃತ್ಯ, ನಾಟಕ ಹಾಗೂ ಲಾವಣಿಗಳೂ ಹೊರಹೊಮ್ಮ ತೊಡಗಿಸಿದವು. ಜನಪದರ ಸಾಹಿತ್ಯ, ಸಂಸ್ಕೃತಿ ಹಾಗೂ ಅವರ ಕಲೆಗಳನ್ನು ಕಟ್ಟಿ ಬೆಳೆಸುವಲ್ಲಿ ನಾಡಿನ ಅಲೆಮಾರಿ ಜನಾಂಗದ ಒಂದು ಪಂಗಡವಾದ ಶಿಳ್ಳೇಕ್ಯಾತರು ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದ್ದಾರೆ.

ಶಿಳ್ಳೇಕ್ಯಾತರು ಕರ್ನಾಟಕದಷ್ಟೇ ಅಲ್ಲ. ಭಾರತದ ರಾಜ್ಯ ಹಾಗೂ ಸಾಂಸ್ಕೃತಿಕ ಪರಂಪರೆ ಉಳಿಯಲು ಹಾಗೂ ಅದನ್ನು ಬೆಳೆಯಲು ಸಾಕಷ್ಟು ಶ್ರಮವಹಿಸಿದ್ದಾರೆ. ರಾಜ್ಯದ ಮೇಲೆ ಬೇರೆ ರಾಜರು ದಾಳಿ ಮಾಡಲು ಬಂದಾಗ ಅವರ ಸುಳಿವನ್ನು ಕೊಡುವುದು ಹಾಗೂ ರಾಜ್ಯ ಆತಂಕದ ಸ್ಥಿತಿಯಲ್ಲಿದ್ದಾಗ ಅದನ್ನು ಪರಿಹಾರ ಮಾಡುವ ಕಾರ್ಯದಲ್ಲಿ ಅವರು ನಿಸ್ಸೀಮರು. ಮುಖಕ್ಕೆ ಮುಖವಾಡವನ್ನು ಹಾಕಿ ರಾಮಾಯಣ ಮತ್ತು ಮಹಾಭಾರತದಂತಹ ಮಹಾಗ್ರಂಥಗಳ ಸಾರವನ್ನು ಜನಸಾಮಾನ್ಯರ ಆಡುಭಾಷೆಯಲ್ಲಿ ಜನರ ಮನಸ್ಸಿಗೆ ಮುಟ್ಟುವಂತೆ ಹಾಗೂ ಜನಸಾಮಾನ್ಯರಿಗೆ ತಲುಪುವಂತೆ ಮಾಡುತ್ತಿದ್ದರು. ಅದಲ್ಲದೆ ನೈತಿಕ ಹಾಗೂ ಪೌರಾಣಿಕ ಲಾವಣಿಗಳನ್ನು ರಚಿಸಿ ಜನರಿಗೆ ನೀತಿ ಪಾಠವನ್ನು ಹೇಳಿಕೊಡುತ್ತಿದ್ದರು. ಹಳ್ಳಿ ಹಳ್ಳಿಗೂ ರಾಜನ ಸಂದೇಶ ಹಾಗೂ ರಾಜ ಮತ್ತು ಪ್ರಜೆಗಳ ಕರ್ತವ್ಯದ ಬಗ್ಗೆ ಬೀದಿ ನಾಟಕಗಳನ್ನು ಮಾಡಿ ಜನರಿಗೆ ಅರಿವನ್ನು ಮೂಡಿಸುತ್ತಿದ್ದರು.

ಕರ್ನಾಟಕ ಜನಪದ ಕಲಾಭಿವ್ಯಕ್ತಿಯ ಒಂದು ಮುಖ್ಯ ಪ್ರಕಾರವಾಗಿರುವುದು ಜನಪದ ರಂಗಭೂಮಿ. ಪ್ರಾಚೀನ ಕಾಲದಿಂದಲೂ ಪ್ರಚಲಿತವಿರುವುದಲ್ಲದೆ, ಶಿಷ್ಟ ರಂಗಭೂಮಿಗಿಂತ ಅನೇಕ ರೀತಿಯಲ್ಲಿ ಭಿನ್ನವಾದದ್ದು ಈ ಕಲೆ, ತನ್ನ ಸ್ವಂತಿಕೆಯನ್ನು

ಉಳಿಸಿಬೆಳೆಸಿಕೊಂಡು ಬಂದಿದೆ. ಜನಪದ ರಂಗಭೂಮಿಗೆ ಸಂಬಂಧಿಸಿದಂತೆ ಬಯಲಾಟ, ತಾಳಮದ್ದಲೆ ಸಣ್ಣಾಟ, ತೊಗಲಗೊಂಬೆ ಆಟ, ಸೂತ್ರದಗೊಂಬೆ ಬೆಳೆಸಿಕೊಂಡು ಬಂದ ಪರಂಪರೆ ಶಿಳ್ಳೇಕ್ಯಾತರದ್ದು. ಈ ಒಂದು ತಲಾ-ತಲಾಂತರದಿಂದ ಬಂದ ಕಲೆ ಇವತ್ತು ಕನ್ನಡ ರಂಗಭೂಮಿ ಅಥವಾ ಚಿತ್ರಲೋಕವನ್ನು ಕಟ್ಟಿದ ಕೀರ್ತಿ ಶಿಳ್ಳೇಕ್ಯಾತ ಸಮುದಾಯದವರದು ಎಂದರೆ ತಪ್ಪಾಗಲಿಕ್ಕಿಲ್ಲ.

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ನಾಡು ಇಂದು ಜನಪದ ಸಾಹಿತ್ಯದಲ್ಲೂ ಹಲವಾರು ಶಿಷ್ಟವರ್ಗಗಳನ್ನು ಮಾಡಿಕೊಂಡು ತನ್ನದೆಯಾದ ನೆಲೆಯನ್ನು ಮಾಡಿಕೊಂಡು ಮುಂದುವರಿಯುತ್ತಿದೆ. ಹಾಗೂ ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ ಹಾಗೂ ಆರ್ಥಿಕವಾಗಿ ಅತ್ಯಂತ ಮುಂಚೂಣಿಯಲ್ಲಿರುವ ನಾಡಾಗಿದೆ. ಇಲ್ಲಿ ವಚನಕಾರರು, ಹರಿದಾಸರು, ತತ್ವಪದಕಾರರು, ಸೂಫಿಸಂತರಿಗೂ ಸೂಕ್ತ ನೆಲೆಯನ್ನು ಒದಗಿಸಿದಂತಹ ನಾಡಿದು. ಇಂತಹ ನಾಡಿನಲ್ಲಿ ಶಿಳ್ಳೇಕ್ಯಾತರು ಸಹ ಹಳ್ಳಿ ಹಳ್ಳಿಗೂ ಮನೆ-ಮನೆಗೂ ಹೋಗಿ ತಮ್ಮ ತಂಬೂರಿಯ ನಾದದೊಂದಿಗೆ, ಬಣ್ಣ-ಬಣ್ಣದ ವೇಷದೊಂದಿಗೆ ಸಾಮಾಜಿಕ ಹಾಗೂ ಸಾಂಸ್ಕೃತಿಕ ಚಳುವಳಿಯನ್ನೇ ಸಾರಿದವರು. ಇಂತಹ ಒಂದು ಅದ್ಬುತ ಸಮುದಾಯದ ಜನರು ಇಂದು ಹೊಟ್ಟೆಗೆ ಒಂದು ಹೊತ್ತು ಊಟವಿಲ್ಲದೆ, ತೊಡಲು ಬಟ್ಟೆಯಿಲ್ಲದೆ ಮನೆಮನೆಗೆ ಹೋಗಿ ಭಿಕ್ಷೆ ಬೇಡುವಂತಹ ಪರಿಸ್ಥಿತಿ ಬಂದಿದೆ. ಒಂದು ಕಾಲದಲ್ಲಿ ಸಾಹಿತ್ಯವನ್ನು ಬಾಯಿಂದ-ಬಾಯಿಗೆ ತಲುಪಿಸುವ ವಿದ್ವಾಂಸರು ಇವತ್ತು ನೆಲೆಯಿಲ್ಲದೆ ಪರದೇಶಿಗಳಾಗಿ ಹೋಗಿದ್ದಾರೆ. ಸಂಸ್ಕೃತಿಯನ್ನು ಚೆಲ್ಲಿದ ಸಮುದಾಯ ಇಂದು ಅನಾಗರೀಕರಾಗಿ ಹರಿದು-ಹಂಚಿ ಹೋಗಿದ್ದಾರೆ. ಇಂತಹ ಒಂದು ಮಹಾನ್ ಸಮುದಾಯದ ಬಗ್ಗೆ ಬೆರಳಣಿಕೆಯಷ್ಟು ಲೇಖನ ಮತ್ತು ಪುಸ್ತಕವನ್ನು ಬಿಟ್ಟರೆ ಯಾವುದೇ ಸಂಶೋಧನೆಗಳು ನಡೆದಿಲ್ಲ. ಹಾಗಾಗಿ ಶಿಳ್ಳೇಕ್ಯಾತರನ್ನು ಕುರಿತು ಇಡಿಯಾಗಿ ಅಧ್ಯಯನ ಮಾಡುವುದು ಇಲ್ಲಿನ ಮೂಲ ಉದ್ದೇಶವಾಗಿದೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿ ಜನಪದ ಸಾಹಿತ್ಯ ಪರಂಪರೆಯ ಸಂದರ್ಭದಲ್ಲೂ ಶಿಳ್ಳೇಕ್ಯಾತರ ಒಟ್ಟು ಸಾಧನೆಯನ್ನು ದಾಖಲಿಸುವುದು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿ-ಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವು ಐದು ಅಧ್ಯಾಯಗಳನ್ನು ಒಳಗೊಂಡಿದೆ.

## ಮಾಹಿತಿ ಆಕರ ಸಾಮಗ್ರಿ ನೆಲೆಗಳು

ಸಂಶೋಧನೆಯ ಮೂಲಭೂಮಿಕೆಯೇ ಮಾಹಿತಿಗಳು ಮತ್ತು ಆಕರ ಸಾಮಾಗ್ರಿಗಳು. ಇವುಗಳ ಆಧಾರದ ಮೇಲೆಯೇ ಸಂಶೋಧನೆಯ ಶಿಲ್ಪ ನಿಂತಿದೆ. ಆದುದರಿಂದ ಆಕರ ಸಾಮಾಗ್ರಿಗಳಿಲ್ಲದೇ ಸಂಶೋಧನೆಯು ಸಾಗಲಾರದು. ಆಕರ

ಸಾಮಾಗ್ರಿಗಳೇ ಸಂಶೋಧನೆಯ ಮೂಲದ್ರವ್ಯ. ಪ್ರಸ್ತುತ ಸಂಶೋಧನಾ ವಿಷಯವು ಕನ್ನಡ ಜನಪದ ಸಾಹಿತ್ಯಕ್ಕೆ ತನ್ನದೇ ಆದ ವಿಶಿಷ್ಟ ಸೇವೆಯನ್ನು ಸಲ್ಲಿಸಿದ ಶಿಳ್ಳೇಕ್ಯಾತರ ಜೀವನ ಮತ್ತು ಸಾಧನೆಗಳಿಗೆ ಸಂಬಂಧಿಸಿದುದಾಗಿದೆ. ಇದಕ್ಕೆ ಸಂಬಂಧಪಟ್ಟ ಆಕರ ಸಾಮಾಗ್ರಿಗಳು ಬಹುತೇಕವಾಗಿ ಲಿಖಿತ ರೂಪದಲ್ಲಿವೆ ಮತ್ತು ಅವೆಲ್ಲ ಅಲ್ಲಲ್ಲಿ ಚದುರಿಹೋಗಿವೆ. ಹಾಗೂ ಅವರಲ್ಲಿ ಕೆಲವೊಬ್ಬ ಹಳೆಯ ತಲೆಮಾರಿನ ವ್ಯಕ್ತಿಗಳ ಮುಖಾಂತರ ಕ್ಷೇತ್ರಕಾರ್ಯವನ್ನು ಕೈಗೊಳ್ಳುವ ಮೂಲಕ ಅವರ ಕಾರ್ಯಕ್ಷೇತ್ರದಲ್ಲೆಲ್ಲಾ ತಿರುಗಾಡಿ ಸಿಗುವ ಆಕರಗಳನ್ನು ಸಂಗ್ರಹಿಸಬೇಕು. ಶಿಳ್ಳೇಕ್ಯಾತರ ಕುರಿತು ಹಾಡುಗಳು ಅವರಿಗೆ ಸಂಬಂಧಪಟ್ಟ ಲೇಖನ ಮತ್ತು ಸಂಚಿಕೆಗಳು ಸಮುದಾಯ ಸಂಗ್ರಹಗಳ ಮೂಲಕ ಸಂಗ್ರಹಿಸಿ, ದಾಖಲಿಸಿಟ್ಟುಕೊಳ್ಳಬೇಕು. ಅಲ್ಲದೇ ಅವರಲ್ಲಿನ ಹಿರಿಯರೊಂದಿಗೆ ಚರ್ಚಿಸಿ ಅವರಲ್ಲಿ ಪ್ರಸಿದ್ಧವಾದ ವಿದ್ವಾಂಸರನ್ನು ಸಂಪರ್ಕಿಸಿ ಹತ್ತು ಹಲವು ಮಾಹಿತಿಗಳನ್ನು ಕಲೆಹಾಕಿ ಇವನ್ನೆಲ್ಲಾ ಶೋಧಿಸಿ. ಸಂಗ್ರಹಿಸಿ ಸಂಶೋಧನಾ ಅಧ್ಯಯನದ ಸಾಫಲ್ಯತೆಯನ್ನು ಪಡೆದುಕೊಳ್ಳಬೇಕಾಗಿದೆ.

## ಅಧ್ಯಯನದ ಪ್ರಸ್ತುತತೆ

ಇಂದಿನ ಜಾಗತೀಕರಣ, ಉದಾರೀಕರಣ ಖಾಸಗೀಕರಣದ ಸಂದರ್ಭದಲ್ಲಿ ಇಡೀ ದೇಶದ ಸಾಂಸ್ಕೃತಿಕ ಜಗತ್ತು ತೀವ್ರ ಬಿಕ್ಕಟ್ಟನ್ನು ಅನುಭವಿಸುತ್ತಿದೆ. ಬೀದಿ ನಾಟಕಗಳು ತೊಗಲುಗೊಂಬೆ ಆಟಗಳು, ಲಾವಣಿಗಳು ಇಂದು ಸಿನಿಮಾ ಪ್ರಪಂಚದೆದುರು ಮರೆಮಾಚಿ ಹೋಗಿವೆ. ದೊಡ್ಡ-ದೊಡ್ಡ ನಿರ್ದೇಶಕರ ಹಾಗೂ ನಿರ್ಮಾಪಕರೆದುರು ಶಿಳ್ಳೇಕ್ಯಾತರಂತ ನಾಟಕಕಾರರು, ವೇಷಗಾರರು ಜನರ ಮನಸ್ಸಿನಿಂದ ಅಳಿಸಿಹೋಗಿದ್ದಾರೆ. ಅವರ ಕಲೆಗೆ ಇಂದು ಒಮದು ಕಾಸಿನ ಮನ್ನಣೆಯು ಇಲ್ಲ. ಇಂದು ಕಲೆಯೂ ವ್ಯಾಪಾರೀಕರಣವಾದುದರಿಂದ ಸಾಮಾನ್ಯ ಕಲೆಗಾರರು ಮೂಲೆಗುಂಪಾಗಿದ್ದಾರೆ. ಸಾಂಪ್ರದಾಯಿಕ ಕಲೆಗಾರರು ಅಧೋಗತಿ ಗೀಡಾಗಿದ್ದಾರೆ. ಇಂತಹ ವಿಷಯ ಸಂದರ್ಭದಲ್ಲಿ ಸಮಾಜ ಸಂಸ್ಕೃತಿ, ಸಾಹಿತ್ಯ, ಹೇಗೆ ಕಾಪಾಡಬೇಕು? ಎಂಬುದು ನಮ್ಮ ಮುಂದಿರುವ ಸವಾಲು. ಇದಕ್ಕಾಗಿ ಮತ್ತೆ ನಾವು ಸಾಹಿತ್ಯ ಸಂಸ್ಕೃತಿಯತ್ತ ಹೊರಳಬೇಕು. ಕನ್ನಡನಾಡು ನುಡಿಯ ಮಹತ್ವವನ್ನು ಸಾರುವ ಸಾಹಿತ್ಯಿಕ, ಸಾಂಸ್ಕೃತಿಕ ಕಾರ್ಯಕ್ರಮಗಳಾದ ತೊಗಲುಗೊಂಬೆ, ದೊಡ್ಡಾಟ, ಸಣ್ಣಾಟ, ಬೀದಿನಾಟಕಗಳಂತಹ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದರ ಮುಖಾಂತರ, ಚಳುವಳಿಗಳ ಮೂಲಕ ನಮ್ಮನ್ನು ನಾವು ಹಾಗೂ ಜನಪದರ ನಿತ್ಯ ಭಾಷೆ, ಕಲೆ ಹಾಗೂ ಸಾಹಿತ್ಯವನ್ನು ಉಳಿಸಿಕೊಳ್ಳಬೇಕಾದ ಅನಿವಾರ್ಯತೆ ಬಂದೊದಗಿದೆ.

ಇಂದು ಯಾವುದೇ ಪ್ರದೇಶದಲ್ಲೂ ಸಾಮಾಜಿಕ, ಧಾರ್ಮಿಕ, ರಾಜಕೀಯ ಇತ್ಯಾದಿ ಸಮಸ್ಯೆಗಳು ಇರುವುದು ಸಹಜ. ಆದರೆ ಇಂದು ಅವುಗಳ ಪ್ರಮಾಣದಲ್ಲಿ

ವ್ಯತ್ಯಾಸವಾಗಿರಬಹುದು ಅಷ್ಟೇ. ಶಿಳ್ಳೇಕ್ಯಾತ ಸಮುದಾಯವು ಅಂದಿನ ಕಾಲದಲ್ಲಿ ಇದ್ದ ಅನೇಕ ಮೌಢ್ಯ ಜಾಡ್ಯ, ಮೇಲು-ಕೀಳು ಅನಿಷ್ಠಗಳ ಬಗ್ಗೆ ಹಾಗೂ ಹತ್ತು ಹಲವು ಮಹಾಗ್ರಂಥಗಳ ಸಾರವನ್ನು ಜನರಿಗೆ ತಿಳಿಸುತ್ತಿದ್ದರು. ಕೆಲವೊಮ್ಮೆ ಜನ ಜೀವನದ ಸ್ಥಿತಿಗತಿಯನ್ನು ಜನರಿಗೆ ತಿಳಿಸುತ್ತಾ ತಮ್ಮನ್ನೇ ತಾವು ಪ್ರಶ್ನಿಸಿ ಮರಗುತ್ತಿದ್ದರು. ಸಮಾಜದ ಅತ್ಯಂತ ಕೆಳಸಮುದಾಯವಾದ ಶಿಳ್ಳೇಕ್ಯಾತರು ವ್ಯವಸ್ಥೆಯ ಬದಲಾವಣೆಗೆ ತಾವು ಆರಿಸಿಕೊಂಡ ಕಲಾಮಾಧ್ಯಮವು ಸಮರ್ಥ ಎಂದು ಕಂಡುಕೊಂಡರು. ಹಲವಾರು ಬೀದಿನಾಟಕ, ರೂಪಾಂತರನಾಟಕ ತೊಗಲುಗೊಂಬೆ, ಸಮುದಾಯ ಸಂಘಟನೆಗಳನ್ನು ಪ್ರಯೋಗಿಸಿ, ಸಮಾಜದ ಸ್ವಾಸ್ಥ್ಯವನ್ನು ಕಾಪಾಡುವುದಕ್ಕೆ ಶ್ರಮಿಸಿದರು. ಶಿಳ್ಳ್ಯಾಕ್ಯಾತ ಸಮುದಾಯವು ಇಂತಹ ಮಹತ್ವದ ಕಾರ್ಯವನ್ನು ಇಂದಿನ ಸಾಂಸ್ಕೃತಿಕ ಬಿಕ್ಕಟ್ಟಿನ ದಿನಗಳಲ್ಲಿ ಅವರು ಕನ್ನಡ ನಾಡು-ನುಡಿಗೆ ಶ್ರಮಿಸಿದ ರೀತಿ ಮತ್ತು ಅವರು ಆಯ್ದುಕೊಂಡ ಕ್ಷೇತ್ರ ಆ ಮೂಲಕ ಅವರು ಸಾಧಿಸಿದ ಯಶಸ್ಸನ್ನು ಇಂದಿನ ಸಮಾಜಕ್ಕೆ ಅರುಹುವುದರ ಮುಖಾಂತರ ಕನ್ನಡ ನಾಡಿನ ಜನಪದರ ಅಂದಿನ ಸಾಹಿತ್ಯ ಹಾಗೂ ಕಲೆಯನ್ನು ಎತ್ತಿ ತೋರಿಸುವುದು ಈ ಅಧ್ಯಯನದ ಪ್ರಸ್ತುತತೆಯಾಗಿದೆ.

**ಅಧ್ಯಯನದ ಮಿತಿಗಳು**

ಯಾವುದೇ ಒಂದು ಸಂಶೋಧನೆಯು ನಿರ್ದಿಷ್ಟವಾದ ಚೌಕಟ್ಟನ್ನು ಹೊಂದಿರಬೇಕು. ಅಂದಾಗ ಅದು ಸುಸ್ಪಷ್ಟತೆಯನ್ನು ಪಡೆದುಕೊಳ್ಳುತ್ತದೆ. ಪ್ರಸ್ತುತ ಸಂಶೋಧನೆಯು ಕನ್ನಡ ನಾಡಿನ ಒಂದು ಸಮುದಾಯ ಹಾಗೂ ಅವರ ಜೀವನ ಮತ್ತು ಸಾಹಿತ್ಯ, ಕಲೆ, ಸಂಸ್ಕೃತಿಗೆ ಕೊಟ್ಟಂತಹ ಕೊಡುಗೆಯನ್ನು ಒಳಗೊಂಡಿರು-ವುದರಿಂದ ಇಡೀ ಸಂಶೋಧನಾ ಅಧ್ಯಯನವು ಸಮುದಾಯ ಮತ್ತು ಅವರ ಕೊಡುಗೆಗಳ ವರ್ತುಲದಲ್ಲಿಯೇ ನಡೆಯಬೇಕು. ಬೇಕಾದರೆ ಇದಕ್ಕೆ ಪೂರಕವಾದ ವಿಷಯ, ಕ್ಷೇತ್ರಗಳತ್ತ ದೃಷ್ಟಿ ಹಾಯಿಸಲೂಬಹುದು. ಆದರೂ ಅದು ಅಧ್ಯಯನದ ಗತಿಯನ್ನೇ ಬದಲಾಯಿಸುವಂತಿರಬಾರದು. ಎಚ್ಚರವನ್ನು ಕಾಯ್ದುಕೊಂಡು ಶಿಳ್ಳೇಕ್ಯಾತರ ಜೀವನ ಮತ್ತು ಅವರ ಕಲೆ ಸಾಹಿತ್ಯಕ್ಕೆ ಸಂಬಂಧಿಸಿದಂತೆ "ಶಿಳ್ಳೇಕ್ಯಾತ ಜನಾಂಗದ ಒಂದು ಸಂಕ್ಷಿಪ್ತ ಅಧ್ಯಯನ" ಎಂಬ ಸಂಶೋಧನಾ ವಿಷಯಕ್ಕೆ ಅನುಗುಣವಾಗಿ ಸಂಶೋಧನಾ ಅಧ್ಯಯನವನ್ನು ಕೈಗೊಳ್ಳಲಾಗುತ್ತಿದೆ.

**ಪ್ರಯೋಜನಗಳು**

ನಾವು ಯಾವುದೇ ತರಹದ ಸಂಶೋಧನೆಯನ್ನು ಕೈಗೊಳ್ಳಲು ಅದು ಸಮಾಜಕ್ಕೆ ಮತ್ತು ಕ್ಷೇತ್ರಕ್ಕೆ ಪ್ರಯೋಜನವನ್ನು ನೀಡಬೇಕು. ಅಂದಾಗ ಮಾತ್ರ ಅದಕ್ಕೆ ಮೌಲ್ಯಬರುತ್ತದೆ. "ಶಿಳ್ಳೇಕ್ಯಾತ ಜನಾಂಗದ ಒಂದು ಸಂಕ್ಷಿಪ್ತ ಅಧ್ಯಯನ" ಎಂಬ

ಪ್ರಸ್ತುತ ಸಂಶೋಧನಾ ವಿಷಯವು ಶತ-ಶತಮಾನಗಳಿಂದ ಸಮಾಜದ ಉಳಿವಿಗಾಗಿ ಹಾಗೂ ಈ ನೆಲದ ಕಲೆ, ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಉಳಿಸಿ ಬೆಳೆಸುವಲ್ಲಿ ಸತತ ಪ್ರಯತ್ನ ಮಾಡುತ್ತಾ ಬಂದಿರುವ ಅತ್ಯಂತ ಕೆಳವರ್ಗ ಹಾಗೂ ಅಲೆಮಾರಿ ಜನಾಂಗಕ್ಕೆ ಸೇರಿದ ಶಿಳ್ಳೇಕ್ಯಾತರ ಸಾಧನೆಗೆ ಸಂಬಂಧಿಸಿದುದಾಗಿದೆ. ಹಿಂದಿನ ಕಾಲದಲ್ಲಿ ರಾಜವಂಶಗಳು ಬೆಳೆಯಲು ಹಾಗೂ ಅವರ ಎಲ್ಲಾ ರೀತಿಯ ಕಾರ್ಯಗಳನ್ನು ಜನರಿಗೆ ಮೂಡಿಸುವ ಕಾರ್ಯಕರ್ತರು ಶಿಳ್ಳೇಕ್ಯಾತರು. ಅವರು ಬೀದಿ-ಬೀದಿಗೆ ಹೋಗಿ ರಾಮಾಯಣ, ಮಹಾಭಾರತ ಹಾಗೂ ಮಹಾಪುರಾಣಗಳನ್ನು ಜನರಮಟ್ಟಿಗೆ ತಲುಪಿಸುತ್ತಾ ಜನರ ಸಂಸ್ಕೃತಿ ಹಾಗೂ ಅವರ ವೈಚಾರಿಕ ಬುನಾದಿಯನ್ನು ಗಟ್ಟಿಯಾಗಿ ಕಟ್ಟಲು ಈ ಸಮುದಾಯ ಅತ್ಯಂತ ಉನ್ನತವಾದ ಕಾರ್ಯವನ್ನು ಮಾಡುತ್ತಾ ಬಂದಿದೆ. ಈಗಲೂ ಸಹ ಆ ಸಮುದಾಯಕ್ಕೆ ಸಂಬಂಧಿಸಿದ ಜನರ ಅಂದಿನ ಸಂಸ್ಕೃತಿ ಹಾಗೂ ಕಲೆ ಮತ್ತು ಲಾವಣಿಗಳನ್ನು ಹಳ್ಳಿ-ಹಳ್ಳಿಗೂ ಹೋಗಿ ಜನರಿಗೆ ತಲುಪಿಸುತ್ತಿದ್ದಾರೆ. ಅದೆಲ್ಲದಕ್ಕಿಂತಲೂ ಮಿಗಿಲಾಗಿ ಜನಪದ ಸಾಹಿತ್ಯವನ್ನು ತಲೆಮಾರಿನಿಂದ ತಲೆಮಾರಿಗೆ ತಲುಪಿಸುವಲ್ಲಿ ಅವರ ಕಾರ್ಯ ಅಮೋಘವಾದದ್ದು, ಇಂತಹ ಒಂದು ಸಮುದಾಯದ ಕುರಿತು ಅಧ್ಯಯನ ಮಾಡುವುದರ ಮೂಲಕ ಇಂದಿನ ಯುವ ಪೀಳಿಗೆಗೆ ಸಮಾಜದ ಮುಖ್ಯವಾಹಿನಿಯಲ್ಲಿ ಸೇರ್ಪಡೆಯಾಗದ ಸಾಮಾಜಿಕ ನಾಗರಿಕ ಸೌಲಭ್ಯಗಳಿಂದ ವಂಚಿತರಾದ ಒಂದು ಸಮುದಾಯವನ್ನು ಪರಿಚಯಿಸಿಕೊಡುವುದು ಈ ಸಂಶೋಧನೆಯ ಪ್ರಧಾನ ಉದ್ದೇಶವಾಗಿದೆ.

**ಉಪಸಂಹಾರ**

ಸಾಹಿತ್ಯದ ಉದ್ದೇಶವೇ ಆಯಾಕಾಲದ ತಲ್ಲಣಗಳನ್ನು ಅರಹುವುದರ ಮೂಲಕ ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವದು. ಅಂದಾಗ ಮಾತ್ರ ಸಾಹಿತ್ಯಕ್ಕೆ ಒಂದು ರೀತಿಯ ಅರ್ಥ ಬರುತ್ತದೆ. ಹಾಗೆ ಒಂದು ಸಂಸ್ಕೃತಿ ಏಳ್ಗೆ ಮತ್ತು ಬಿಳ್ಗೆಯು ಸಹ ಅಲ್ಲಿನ ಮಣ್ಣಿನ ಜನ ಹಾಗೂ ಅವರ ಪರಂಪರೆಯ ಮೇಲೆ ನಿಂತಿರುತ್ತದೆ. ಇವತ್ತು ಜಗತ್ತಿನ ಮುಖಪುಟದಲ್ಲೂ ಸಂಸ್ಕೃತಿಯ ಬಗ್ಗೆ ಮಾತನಾಡುವುದಾದರೆ ಅದು ನಮ್ಮ ಪೂರ್ವಜರ ಸಾಹಿತ್ಯ ಮತ್ತು ಸಂಸ್ಕೃತಿಗೆ ಕೊಟ್ಟಂತಹ ಅಪಾರ ಕೊಡುಗೆ. ಹಾಗೆ ಕನ್ನಡದ ನೆಲ ಜಲ ಸಾಹಿತ್ಯ ಸಂಸ್ಕೃತಿಗೆ ಶಿಳ್ಳೇಕ್ಯಾತರು ಸಹ ತಮ್ಮದೆ ಆದ ಅಪಾರ ಕೊಡುಗೆಯನ್ನು ಈ ಮಣ್ಣಿಗೆ ಅವರು ಅರ್ಪಿಸಿದ್ದಾರೆ.

# ಅಧ್ಯಾಯ ಎರಡು
# ಜನಾಂಗದ ಮೂಲ ಹಾಗೂ ಪ್ರಸಾರ

**ಮೂಲಸ್ಥಳ**

**ಜನಾಂಗದ ಪ್ರಸಾರ**

**ಐತಿಹಾಸಿಕ ಮತ್ತು ಪೌರಾಣಿಕ ಹಿನ್ನೆಲೆ**

**ಜನಸಂಖ್ಯೆ**

**ಪೀಠಿಕೆ:**

"ವಿಶ್ವದ ಮೂಲಿಗರೇ ಅಲೆಮಾರಿ ಆದಿವಾಸಿಗಳು" ಎಂಬ ಕುಮುದಾರವರ ಮಾತಿನಂತೆ ಪ್ರಪಂಚದ ಉಗಮದಿಂದ ಇಲ್ಲಿಯವರೆಗೆ ಮನುಷ್ಯ ಒಂದಿಲ್ಲಾ ಒಂದು ರೀತಿ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಬೇರೆಡೆಗೆ ತನ್ನ ಕೆಲಸವನ್ನು ಹುಡುಕುತ್ತಾ ಅಲೆಮಾರಿ ಜೀವನವನ್ನು ನಡೆಸುತ್ತಿದ್ದಾನೆ. ಒಟ್ಟಾರೆ ಈ ಪ್ರಪಂಚವೇ ಒಂದು ಅಲೆಮಾರಿಗಳ ನೆಲೆಯಾಗಿದೆ. ಅಂದರೆ ಇಲ್ಲಿ ಎಲ್ಲರೂ ಒಂದು ರೀತಿ ಅಲೆಮಾರಿಗಳೇ. ಆದರೆ ಕೆಲವರು ಉನ್ನತವಾದ ಸ್ಥಾನದಲ್ಲಿದ್ದು ಐಷಾರಾಮಿ ಅಲೆಮಾರಿ ಜೀವನ ನಡೆಸುತ್ತಿದ್ದರೆ ಇನ್ನೂ ಕೆಲವರೂ ಒಂದು ಹೊತ್ತಿಗೆ ಊಟ ಮಾಡಲು ಆಹಾರವಿಲ್ಲದೆ ಸಾವು ಮತ್ತು ಬದುಕಿಗಾಗಿ ಅಲೆದಾಡುತ್ತಿರುತ್ತಾರೆ. ಭಾರತದ ಅಲೆಮಾರಿ ಜನಾಂಗದ ಇತಿಹಾಸವನ್ನು ತೆಗೆದುಕೊಂಡರೆ ಅದೊಂದು ಮಹಾನ್ ಗ್ರಂಥದಂತೆ ಇತಿಹಾಸದ ಸುರುಳಿಗಳನ್ನು ಒಂದೊಂದಾಗಿ ಬಿಚ್ಚಿಡಬಹುದು. ಒಂದು ಸಮಯದಲ್ಲಿ ದೇಶದ ಭಾಷೆ, ಸಂಸ್ಕೃತಿ ಸಮಾಜದ ಭದ್ರತೆಗಾಗಿ ಹೋರಾಡುತ್ತಿದ್ದ ಈ ಜನಾಂಗ ಕಾಲಕ್ರಮೇಣ ಕೆಲವು ರಾಜರುಗಳು ಕಂಡ ಅಂತ್ಯದಿಂದ ಇವರು ಗುಡ್ಡ-ಗಾಡು ಸೇರುವಂತಹ ಸನ್ನಿವೇಶ ಒದಗಿಬಂದಿತು. ಅಂತಹ ಒಂದು ಮಹಾನ್ ದೇಶಪ್ರೇಮಿಗಳ ನಾಡರಕ್ಷಕರ ಇತಿಹಾಸದ ಪುಟಗಳನ್ನು ನೋಡಿದರೆ ಬಹಳ ವ್ಯಥೆಯುಂಟು ಆಗುತ್ತದೆ. ಸಾವಿರಾರು ವರ್ಷಗಳ ಇತಿಹಾಸವಿರುವ ಭಾರತ ದೇಶವೂ ಹಲವು ಧರ್ಮಗಳ ಜಾತಿ, ಮತಪಂಥಗಳನ್ನು ಹೊಂದಿರುವಂತಹ ಭಾವೈಕ್ಯದ ನಾಡಾಗಿದೆ. ಭಾರತ ಸ್ವತಂತ್ರ-ವಾಗುವುದಕ್ಕಿಂತ ಮೊದಲು ಈ ದೇಶವನ್ನು ಹಲವು ಧರ್ಮದ ಹಲವಾರು ರಾಜರುಗಳು ಈ ನಾಡನ್ನು ಆಳಿದ ಹೆಗ್ಗಳಿಕೆಯಿದ್ದರೂ ಆ ರಾಜರುಗಳ ಬೆನ್ನೆಲುಬಾಗಿ ನಿಂತವರು ಈ ಅಲೆಮಾರಿ ಮತ್ತು ಅರೆ ಅಲೆಮಾರಿ ಜನಾಂಗ. ಇದಕ್ಕೆ ಸಾಕ್ಷಿಯಾಗಿ

ನೋಡುವುದಾದರೆ ಅವುಗಳನ್ನು ಈ ಕೆಳಗಿನ ಸಾಮ್ರಾಜ್ಯಗಳ ಇತಿಹಾಸವನ್ನು ತೆಗೆದುಕೊಳ್ಳಬಹುದು.

**ಗುಪ್ತರ ಸುವರ್ಣಯುಗ**

ಇತಿಹಾಸದ ಸುವರ್ಣಾಕ್ಷರದಲ್ಲಿ ಬರೆದಿಡುವಂತಹ ಗುಪ್ತಸಾಮ್ರಾಜ್ಯವನ್ನು ಕಟ್ಟಿದ ಕೀರ್ತಿ ಅರೆ ಅಲೆಮಾರಿ ಜನಾಂಗ. ಇದೊಂದು ಚಿಕ್ಕ ಸಮುದಾಯ ಮುಂದೆ ಮೌರ್ಯರಿಂದ ಸೋಲಲ್ಪಟ್ಟು ಅಲೆಮಾರಿ ಜನಾಂಗದ ಬಲಿಷ್ಠ ವ್ಯಕ್ತಿಯಾದ ೧ನೇ ಚಂದ್ರಗುಪ್ತಮೌರ್ಯ ಇವನು ಇಡೀ ಅಲೆಮಾರಿ ಜನಾಂಗವನ್ನು ಒಂದುಗೂಡಿಸಿ ಬಲಿಷ್ಠವಾದ ಸೈನ್ಯ ಹಾಗೂ ಬಲಿಷ್ಠ ರಾಜ್ಯವನ್ನು ಕಟ್ಟಿ ಇಡೀ ಭರತಖಂಡವನ್ನು ಒಗ್ಗೂಡಿಸಿದ ಕೀರ್ತಿಗೆ ಪಾತ್ರನಾಗುತ್ತಾನೆ. ಎಂದರೆ ಭಾರತ ಎನ್ನುವ ಇಂದಿನ ದೇಶದ ಏಳ್ಗೆಗೆ ದುಡಿದು ಮಡಿದವರು ಅಲೆಮಾರಿ ಜನಾಂಗ ಎನ್ನುವುದು ಇಲ್ಲಿ ನೆನೆಪಿಸಿಕೊಳ್ಳುವುದು ಅತ್ಯಂತ ಸೂಕ್ತ. ತದನಂತರ ಭರತಖಂಡದ ಹಲವು ಕಡೆ ಹಿಂದೂಸಾಮ್ರಾಜ್ಯಗಳು ನೆಲೆಯೂರಲು ಪ್ರಾರಂಭಿಸಿದವು. ಉದಾಹರಣೆಗೆ ಹೇಳಬೇಕಾದರೆ ಕರ್ನಾಟಕದಲ್ಲೂ ವಿಜಯನಗರ ಸಾಮ್ರಾಜ್ಯ ಸ್ಥಾಪಕರಾದ ಹಕ್ಕ ಮತ್ತು ಬುಕ್ಕರು. ಇದೇ ಸಮಯದಲ್ಲಿ ಬಹುಮನಿ ಸುಲ್ತಾನರು ಸಹ ಕರ್ನಾಟಕದ ಉತ್ತರಭಾಗದ ಪ್ರದೇಶಗಳಾದ ವಿಜಾಪೂರ, ಗುಲ್ಬರ್ಗಾದಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಇವರ ಆಕ್ರಮಣ ಹಾಗೂ ಇನ್ನಿತರ ಗುಪ್ತಚಟುವಟಿಕೆಗಳನ್ನು ವಿಜಯನಗರದ ಅರಸರಿಗೆ ತಿಳಿಸುವುದು ಹಾಗೂ ಅವರ ಕುತಂತ್ರ ನೀತಿಗಳನ್ನು ಮುರಿದು ಹಾಕಿ ವಿಜಯನಗರ ಸಾಮ್ರಾಜ್ಯವನ್ನು ವಿಶ್ವದ ಇತಿಹಾಸ ಪುಟದಲ್ಲಿ ಸೇರುವಂತೆ ಮಾಡಿದವರು ಅಲೆಮಾರಿಗಳು.

ಮೌರ್ಯರ ಅವನತಿಯ ನಂತರ ಮೊಗಲರ ಆಡಳಿತ ಭಾರತದ ದಕ್ಷಿಣಕ್ಕೂ ವ್ಯಾಪಿಸಿತು. ಹೀಗಾಗಿ ಅಲೆಮಾರಿಗಳು ಸಹಜವಾಗಿ ಮೊಗಲರ ಕೈಗೊಂಬೆಯಾದರು. ಆದರೆ ಇನ್ನು ಕೆಲವರು ಅವರಿಂದ ತಪ್ಪಿಸಿಕೊಂಡು ಕೆಲವು ಗುಡ್ಡಗಾಡು ಪ್ರದೇಶದಲ್ಲಿ ತಮ್ಮ ಜೀವನವನ್ನು ಪ್ರಾರಂಭಿಸಿದರು. ಮೊಗಲರ ಅಧೀನದಲ್ಲಿದ್ದ ಸಾಕಷ್ಟು ಅಲೆಮಾರಿಗಳು ಹಲವಾರು ಕಲೆಗಳಲ್ಲಿ ಪರಿಣಿತಿಯನ್ನು ಹೊಂದಿರುವಂತಹವರು. ಹೀಗಾಗಿ ಮೊಗಲರ ಕಾಲದಲ್ಲಿ ವಿಶ್ವಪ್ರಸಿದ್ಧವಾದ ಚಿತ್ರಕಲೆಗಳು ಬೆಳಕಿಗೆ ಬಂದವು. ಅದರಲ್ಲೂ ಇಂದಿಗೂ ವಿಶ್ವಪ್ರಸಿದ್ಧವಾದ ತಾಜಮಹಲಿನ ಒಂದೊಂದು ಚಿತ್ರಗಳು ಅಲೆಮಾರಿ ಜನಾಂಗದ ಕಥೆಗಳನ್ನು ತಿಳಿಸುತ್ತವೆ. ಇಡೀ ತಾಜಮಹಲಿನ ಕಲೆಗಳು ಅಲೆಮಾರಿ ಜನಾಂಗದ ಶ್ರಮದಿಂದ ಹೊರಬಂದಿದ್ದು ಎಂದರೆ ತಪ್ಪಾಗಲಿಕ್ಕಿಲ್ಲ. ಆದರೆ

ದುರ್ದೈವವಶಾತ್ ಯಾವುದೇ ಕಲೆಗಾರರ ಶ್ರಮ ಯಾರ ಅರಿವಿಗೂ ಬರುವುದಿಲ್ಲ. ಕೇವಲ ಅದರ ಯಜಮಾನರು ಮಾತ್ರ ಎದುರಿಗೆ ಬರುವಂತಹದ್ದು.

ಮೊಗಲರ ಸೈನಿಕರಲ್ಲಿ ಉನ್ನತ ಸ್ಥಾನವನ್ನು ಮುಸ್ಲಿಮರಿಗೆ ಕೊಟ್ಟು ಉಳಿದ ಸಣ್ಣಪುಟ್ಟ ದಫೇದಾರ್ ಮತ್ತು ಸಿಪಾಯಿ ಸ್ಥಾನವನ್ನು ಕೊಟ್ಟಿದ್ದರು. ಆದರೆ ಅವರಿಗೆ ಪ್ರತಿಯೊಂದು ವಿಷಯದಲ್ಲೂ ಅವರನ್ನು ಗುಲಾಮರಂತೆ ನೋಡಿಕೊಳ್ಳಲಾಗುತ್ತಿತ್ತು. ಮೊಗಲರ ಕೊನೆಯ ಪ್ರಸಿದ್ಧ ದೊರೆಯಾದ ಔರಂಗಜೇಬನ (೧೬೫೮-೧೭೦೭) ಸಮಯದಲ್ಲೂ ಅರೆ ಅಲೆಮಾರಿ ಜನಾಂಗದವರು ತಮ್ಮದೇಆದ ಎರಡು ಗುಂಪುಗಳನ್ನು ಮಾಡಿಕೊಂಡು ರಾಜಸ್ಥಾನ ಮತ್ತು ಮಹಾರಾಷ್ಟ್ರದ ಕಡೆ ಹೋಗಿ ಇಡೀ ಅಲೆಮಾರಿಗಳನ್ನು ಒಂದುಮಾಡಿ ತಮ್ಮದೇ ಸೈನ್ಯ ಬಲ ಮತ್ತು ಆರ್ಥಿಕ ಬಲವನ್ನು ಸಿದ್ಧಪಡಿಸಿಕೊಂಡರು. ಈ ಒಂದು ಕಾಲ ಭರತ ಖಂಡ ಮತ್ತು ಹಿಂದೂ ಧರ್ಮದ ನೆಲೆಗೊಳ್ಳುವಂತೆ ಮಾಡಲು ಅಲೆಮಾರಿ ಜನಾಂಗದ ಕೊಡುಗೆ ಅತ್ಯಂತ ಉನ್ನತ-ವಾದದ್ದು, ಹಿಂದೂ ಸಂಸ್ಕೃತಿಯನ್ನು ಅಳಿಸಿ ಹಾಕಿದ ಮೊಗಲರನ್ನು ಹೊಡೆದೊಡಿಸಿ ಮತ್ತೊಮ್ಮೆ ಭರತಖಂಡದಲ್ಲಿ ಹಿಂದೂ ಸಂಸ್ಕೃತಿಯನ್ನು ಅಜರಾಮರವಾಗಿ ಉಳಿಸಲು ತಮ್ಮ ಜೀವನವನ್ನೆ ಒತ್ತೆಯಿಟ್ಟು ಕಾಪಾಡಿದರು.

ಮೊಗಲರ ಅರಸರಿಂದ ತಪ್ಪಿಸಿಕೊಂಡು ತಲೆಮರೆಸಿಕೊಂಡಿದ್ದ ರಜಪೂತರು, ಲಂಬಾಣಿಗರು ಹಾಗೂ ಗಡ್ಡಿ ಅಲೆಮಾರಿ ಜನಾಂಗವು ಒಂದಾಗಿ ಔರಂಗಜೇಬನನ್ನು ಬಗ್ಗಿಸಲು ಪ್ರಯತ್ನಿಸುತ್ತಿದ್ದರು. ಅದೇ ಸಮಯದಲ್ಲಿ ಎರಡನೇ ಗುಂಪಾದ ಮರಾಠರು ಶಿವಾಜಿಯ ನೇತೃತ್ವದಲ್ಲಿ ಮೊಗಲರ ಸಂಗಡ ದಂಗೆಯೆದ್ದರು. ಹೀಗೆ ಎರಡು ಗುಂಪುಗಳು ಸ್ವಲ್ಪವೇ ಸೈನಿಕರನ್ನು ಇಟ್ಟುಕೊಂಡ ತಮ್ಮ ಜಾಣಕ್ಯ ನೀತಿ ಹಾಗೂ ಗೆರಿಲ್ಲಾ ಯುದ್ಧದಿಂದ ಮೊಗಲರನ್ನು ಸೋಲಿಸಿದರು. ಹೀಗೆ ಹತ್ತು ಹದಿನೈದು ಗುಡಿಸಲು-ಗಳನ್ನು ಮಾಡಿಕೊಂಡು ಒಂದೆಡೆ ಕಾಡಿನಲ್ಲಿರುವ ಈ ಜನಾಂಗ ದೇಶಕ್ಕೆ ಚ್ಯುತಿ ಬಂದಾಗ ಎಲ್ಲರೂ ಒಂದಾಗಿ ಹೋರಾಡುವಂತಹ ಸ್ವಭಾವದವರು.

ಇಡೀ ಇತಿಹಾಸವನ್ನು ನೋಡಿದಾಗ ಸ್ವಾಭಿಮಾನ, ದೇಶಪ್ರೇಮವನ್ನು ಮೆರೆದಂತಹ ಈ ಜನಾಂಗ ಮುಂದೆ ಸ್ವತಂತ್ರ ನಂತರ ಯಾವುದೇ ಸ್ಥಾನಮಾನ ದೊರೆಯದೆ ಅದೇ ಕಾಡಿನಲ್ಲಿಯೇ ಜೀವನ ಪ್ರಾರಂಭಿಸಿದರು. ಕಾಡಿನಲ್ಲಿ ದೊರೆಯುವಂತಹ ಸಿಂಧೆ ಪರಕಿ, ಹಣ್ಣು, ಜೇನು, ಹೂವುಗಳು ಇನ್ನೀತರ ಗಿಡಮೂಲಿಕೆಗಳನ್ನು ಮಾರಿಕೊಂಡು ಜೀವನ ನಡೆಸುತ್ತಿದ್ದರು. ಕ್ರಮೇಣ ಇವೆಲ್ಲ

ಸಿಗದೆಯಿದ್ದಾಗ ಕಳ್ಳತನ, ದರೋಡೆಯಂತಹ ಕೆಲಸಕ್ಕೆ ಕೈಹಾಕಿ ಹೊಟ್ಟೆತುಂಬಿಸಿಕೊಂಡಿದ್ದುಂಟು.

**ಅಲೆಮಾರಿ ಪದದ ಅರ್ಥ**

ಅಲೆಮಾರಿ ಎಂಬ ಪದಕ್ಕೆ ತಮಿಳಿನಲ್ಲಿ ಪೊಕ್ಕಸ್, ತುಳುವಿನಲ್ಲಿ ತೆಂಡುಳಿ, ತೆಲುಗಿನಲ್ಲಿ ತಿರುಗುಬೋಡು, ಮಲೆಯಾಳಂನಲ್ಲಿ ತೆಂಟಿ, ಮರಾಠಿಯಲ್ಲಿ ಭಟತ್ಯಾ, ಹಿಂದಿಯಲ್ಲಿ ಸಂಚಾರಿ, ಘಮಂತು, ಗ್ರೀಕಿನಲ್ಲಿ ನೆಮಿನ್, ಲ್ಯಾಟಿನಲ್ಲಿ ನೋಮಾಸ್, ಇಂಗ್ಲಿಷಿನಲ್ಲಿ ನೊಮ್ಯಾಡ್ (Nomad) ಜೊತೆಗೆ ಪರದೇಶಿ, ನೆಲೆಯಿಲ್ಲದವರು, ದೇಶಸಂಚಾರಿಗಳು, ಪರಸ್ಥಳದವರು, ಹೊರಗಡೆಯವರು, ಉಚಲ್ಯಾ, ಜಿಪ್ಸಿ, ಬೀಡು ಬಿಡುವವರು, ಗುಳೆ ಹೋಗುವವರು, ವಲಸಿಗರು, ಗಿರಿಜನರು ಎಂಬ ಇತ್ಯಾದಿ ಹೆಸರುಗಳಿಂದಲೂ ಕರೆಯಲಾಗುತ್ತದೆ. ಭೀಕ್ಷಾವೃತ್ತಿಯ ಹಿನ್ನೆಲೆಯಲ್ಲಿ ಇವರನ್ನು ತಮಿಳಿನಲ್ಲಿ ಪಿಚ್ಚೆಕರಾ, ಹಿಂದಿಯಲ್ಲಿ ಬಿಕಾರಿ, ಕನ್ನಡದಲ್ಲಿ ಭಿಕ್ಷುಕರೆಂತಲೂ ಗುರುತಿಸಲಾಗುವುದು. ಜನಪದರು ಇವರನ್ನು ಗೋಸಾಯಿ, ಜಂಗಾಲಿ, ಜಂಗಮ, ಜೋಗಿ, ದಾಸಯ್ಯ ಎಂತಲೂ ಕರೆಯುವರು. ಮಾನವಶಾಸ್ತ್ರಜ್ಞರು ಆರಂಭದಲ್ಲಿ ಪಶುಪಾಲನೆ ಮತ್ತು ಕುರಿಗಳನ್ನು ಕಾಯುವರನ್ನು ಮಾತ್ರ ಅಲೆಮಾರಿ ಸಮುದಾಯದವರೆಂದು ಗುರುತಿಸಿದ್ದಾರೆ. ಎನ್‌ಸೈಕ್ಲೋಪಿಡಿಯಾ ಪ್ರಕಾರ ಅಲೆಮಾರಿತನವು ಒಂದು ಜೀವನ ವಿಧಾನ. ಬೇಟೆ ಮತ್ತು ಆಹಾರ ಸಂಗ್ರಹಣೆ, ಪಶುಪಾಲನೆ ಅಥವಾ ವ್ಯಾಪಾರಕ್ಕಾಗಿ ಮಾನವ ಒಂದೆಡೆಯಿಂದ ಮತ್ತೊಂದೆಡೆ ದಿಕ್ಕು ದೆಸೆಯಿಲ್ಲದೆ ಅಲೆಯುವಿಕೆಯನ್ನು ಅಲೆಮಾರಿತನ ಎನ್ನಲಾಗುತ್ತದೆ ಎಂದು ಅರ್ಥೈಸಿದೆ.

ಕರ್‌ದಾರ್‌ರವರು ಹೇಳುವಂತೆ "ಹಲವು ಗುಂಪುಗಳ ಸಮೂಹವು ಒಂದಾದ ನಂತರ ಒಂದರಂತೆ ಹೊಟ್ಟೆಪಾಡಿಗಾಗಿ ಅಲೆದಾಡುವ ಒಂದು ಸಮೂಹ". ಮಿಶ್ರಾರವರ (೧೯೭೦) ಪ್ರಕಾರ 'ಹಲವು ಗುಂಪುಗಳ ಒಂದು ಸಮೂಹ ಅಥವಾ ಕುಟುಂಬದ ಒಬ್ಬ ವ್ಯಕ್ತಿ ವರ್ಷದ ಅರ್ಧಭಾಗ ಏಕಾಂಗಿಯಾಗಿ ಅಥವಾ ಗುಂಪು-ಗುಂಪಾಗಿ ಚಲಿಸಿ ಅವರ ಬೇಕು-ಬೇಡಗಳನ್ನು ಪೂರೈಸಿಕೊಂಡು ಮತ್ತೆ ಮರಳಿ ಸ್ವಸ್ಥಳಕ್ಕೆ ವಾಪಾಸ್ಸಾಗುವುದು.

ವಾಲಸಬೆ (೧೯೬೮) ಇವರ ಪ್ರಕಾರ ಹೇಳುವುದಾದರೆ ವಿವಿಧ ಸನ್ನಿವೇಶಕ್ಕಗನುಗುಣವಾಗಿ ಅಲೆದಾಡುವ ಒಂದು ಸಮೂಹ. ಇವರು ಮುಂದುವರಿದು ಅಲೆಮಾರಿಗಳನ್ನು ಮೂರು ವಿಧವಾಗಿ ವಿಂಗಡಿಸಿದರು. ಅವುಗಳೆಂದರೆ, ಅಲೆಮಾರಿ, ಅರೆ-ಅಲೆಮಾರಿ ಹಾಗೂ ಒಂದೇ ಸ್ಥಳದಲ್ಲೂ ವಾಸವಿರುವವರು. ಇವರು ತಮಗೆ

ಬೇಕಾದ ಆಹಾರ ಸಾಮಾಗ್ರಿಗಳನ್ನು ಕಲೆಹಾಕಲು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಿ ಮತ್ತೆ ಅದೆ ಸ್ಥಳಕ್ಕೆ ಬರುವರು. ಇಲ್ಲಿ Sedentary ಎಂಬ ಪದವನ್ನು ಹಲವು ಸಂಶೋಧಕರು ಒಂದೇ ಸ್ಥಳದಲ್ಲಿ ವಾಸವಾಗಿರುವ ವ್ಯಕ್ತಿಗಳನ್ನು ಕ್ರೀಯಾಶೀಲವಾಗಿರದ ವ್ಯಕ್ತಿಗಳ ಗುಂಪು ಎಂದು ವಿವರಿಸಿದ್ದಾರೆ.

ವೆಬ್‌ಸ್ಟರ್ ಡಿಕ್ಷನರಿ ಪ್ರಕಾರ (ವೈಲ್ಡ್ ಮತ್ತು ಪರಿಟಡ್ಜ್ ೧೯೭೦) sedentaryಗೆ ಇನ್ನೊಂದು ಪದವನ್ನು ಕೊಟ್ಟಿದೆ "ಚಲಿಸಲಾರದ" (not moving).

ಒಟ್ಟಾರೆ ಅಲೆಮಾರಿ ಎಂದರೆ, ವಿಶ್ರಾಂತಿ ಇಲ್ಲದೆ ಚಲಿಸುವ ಒಂದು ಸಮೂಹ ಹಾಗೂ ಸಮಾಜ. ಒಂದೆ ಕಡೆ ನೆಲೆಯಿಲ್ಲದೆ ಸತತವಾಗಿ ಚಲಿಸುವ ಒಂದು ಜನಾಂಗ. ಸನ್ನಿವೇಶಕ್ಕನುಗುಣವಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಚಲಿಸುವ ಗುಂಪು. ಹೀಗೆ ತನ್ನ ಜೀವನೋಪಾಯಕ್ಕಾಗಿ ವ್ಯಕ್ತಿ ಅಥವಾ ಗುಂಪು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗಿ ಬದುಕುವ ಜನಾಂಗ. ಅವರಿಗೆ ಒಂದು ಕಡೆ ಕೆಲಸವಿಲ್ಲದೆ ಹೊಟ್ಟೆಪಾಡಿಗಾಗಿ ವಸ್ತುಗಳನ್ನು ಮಾರಾಟ ಮಾಡಿ ಅಥವಾ ಅವರ ಕಲೆಯನ್ನು ಪ್ರದರ್ಶಿಸಿ ತಮ್ಮ ಮತ್ತು ಕುಟುಂಬದ ಜೀವನವನ್ನು ನಡೆಸಲು ಈ ಜನರು ಊರಿಂದೂರಿಗೆ ಅಲೆದಾಡುತ್ತಾರೆ. ಇಂತಹ ಜನರು ಭಾರತದಲ್ಲಿ (ಸಿಂಗ.ಕೆ.ಎಸ್. ೧೯೯೬) ೧೮೮೧ರ ಜನಗಣತಿಯ ಪ್ರಕಾರ ಒಟ್ಟು ೧೯೨೯ ಜಾತಿ ಮತ್ತು ಬುಡಕಟ್ಟು ಸಮುದಾಯಗಳು ಹಾಗೂ ಸಾವಿರ ಜನರೊಳಗಿರುವ ೧೯೭೧ ಅಲ್ಪಸಂಖ್ಯಾತ ಜಾತಿ ಮತ್ತು ಬುಡಕಟ್ಟುಗಳು ದಾಖಲಾಗಿರುವುದನ್ನು ಕಾಣಬಹುದು (Eustace, J.Kitts : 1982)

ಕರ್ನಾಟಕಕ್ಕೆ ಸಂಬಂದಿಸಿದಂತೆ ೫೬ ವಿಮುಕ್ತ ಅಲೆಮಾರಿ ಮತ್ತು ಅರೆ ಅಲೆಮಾರಿ ಬುಡಕಟ್ಟುಗಳಿರುವುವು. ಇವುಗಳನ್ನು ಅನಂತರದ ಅವಧಿಗಳಲ್ಲಿ ಸಂವಿಧಾನಬದ್ಧವಾಗಿ ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದ ವರ್ಗಗಳ ಪಟ್ಟಿಗಳಲ್ಲಿ ಇರಿಸಲಾಗಿದೆ. ವಿಮುಕ್ತಗೊಳಿಸಿದ ೨೪ ಸಮುದಾಯಗಳಲ್ಲಿ ಪರಿಶಿಷ್ಟಜಾತಿ, ೨ ಪರಿಶಿಷ್ಟ ಪಂಗಡ ಮತ್ತು ೧೩ ಸಮುದಾಯಗಳಿಗೆ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಇದುವರೆಗೆ ಸ್ಥಾನ ಕಲ್ಪಿಸಲಾಗಿದೆ. ೩೨ ಅಲೆಮಾರಿ ಸಮುದಾಯಗಳಲ್ಲಿ ೫ ಪರಿಶಿಷ್ಟ ಜಾತಿ, ೩ ಪರಿಶಿಷ್ಟ ಪಂಗಡ, ೨೪ ಸಮುದಾಯಗಳನ್ನು ಹಿಂದುಳಿದ ವರ್ಗಗಳ ಪಟ್ಟಿಯಲ್ಲಿ ಸ್ಥಾನ ಕಲ್ಪಿಸಲಾಗಿದೆ. ಬ್ರಿಟಿಷ್ ಕುಲಶಾಸ್ತ್ರೀಯ ಅಧ್ಯಯನದ ಪ್ರಕಾರ ೨೪ ಅಲೆಮಾರಿ ಬುಡಕಟ್ಟುಗಳನ್ನು ನಮೂದಿಸಿರುತ್ತಾರೆ. ಅದರಲ್ಲಿ ಶಿಳ್ಳೇಕ್ಯಾತರು ಒಬ್ಬರು.

## ಶಿಳ್ಳೇಕ್ಯಾತರು ಹಾಗೂ ಅವರ ಮೂಲ ಮತ್ತು ಪ್ರಸಾರ

ಅಲೆಮಾರಿ ಜನಾಂಗದಲ್ಲಿ ಒಂದಾದ ಶಿಳ್ಳೇಕ್ಯಾತರು ಎಂಬ ಜನಾಂಗವು ಹಲವಾರು ಉಪನಾಮಗಳಿಂದ ಕರೆಯಲ್ಪಡುತ್ತದೆ. ಎಂತೋವೆನ್ (Enthoven 1922; ಬಿಜಾಪುರ ಗೆಜೆಟರ್ ೧೮೮೮), ರವರ ಪ್ರಕಾರ ಕಲ್ಲೇಕೆಟ್, ಕಟಬು ಶಿಳ್ಳೇಕ್ಯಾತ ಹಾಗೆ ನಂಜುಂಡಯ್ಯ ಮತ್ತು ಅಯ್ಯರ್ (೧೯೩೦) ಥರ್ಸ್ಟನ್ (೧೯೦೯) ರವರ ಪ್ರಕಾರ ಶಿಳ್ಳೇಕೇತರ್ ಅಥವಾ ಛಲೀ ಎಂದು ಧಾರವಾಡ (ಗೆಜೆಟರ್ ೮೮), ಗೊಂಬೆ ರಾಮ (ಪರಮಶಿವಯ್ಯ ೧೯೭೧) ಹೀಗೆ ಹಲವಾರು ಹೆಸರುಗಳಿಂದ ಕರೆಯಲ್ಪಡುವ ಈ ಸಮುದಾಯವು ಮೈಸೂರು ಸರ್ಕಾರ (೧೯೬೭) ಇವರನ್ನು ಶಿಳ್ಳೇಕ್ಯಾತರು ಎಂದು ಗುರುತಿಸಿದ್ದಾರೆ. ಶಿಳ್ಳೇಕ್ಯಾತ, ಕಿಳ್ಳೇಕ್ಯಾತ, ಕಿಳ್ಳೇಕೇತರ, ಕುಟುಂಬ ಮತ್ತು ಗೊಂಬೆರಾಮ ಎಂದು ಒಂದೇ ಸಮುದಾಯದ ಉಪನಾಮಗಳಾಗಿವೆ.

ನನ್ನ ಸಂಶೋಧನೆಯಲ್ಲಿ ಮಾತ್ರ ನಾನು ಮೈಸೂರು ಸರ್ಕಾರ ನಾಮಕರಣ ಮಾಡಿದ ಹೆಸರಿನಲ್ಲಿ ಎಂದರೆ ಶಿಳ್ಳೇಕ್ಯಾತರೆಂದು ಕರೆಯುತ್ತೇನೆ/ನಮೂದಿಸುತ್ತೇನೆ. ಈ ಒಂದು ಚಿಕ್ಕದಾದ ಸಮುದಾಯವನ್ನು ಮೈಸೂರು ಸರ್ಕಾರ ಅಲೆಮಾರಿ ಪಟ್ಟಿಯಲ್ಲೂ ಸೇರಿಸಿದ್ದು, ಈ ಸಮುದಾಯವು ಉತ್ತರ ಕರ್ನಾಟಕದ ಧಾರವಾಡ, ಬಿಜಾಪುರ ಹಾಗೂ ಗುಲ್ಬರ್ಗದಲ್ಲಿದ್ದು, ಮುಂಬಯಿ/ಕರ್ನಾಟಕದ ಭಾಗವಾದ ಬೆಳಗಾವಿಯಲ್ಲಿಯೂ ಸಹ ಕಂಡುಬರುತ್ತದೆ. ಇವೆಲ್ಲಾ ಜಿಲ್ಲೆಗಳ ಜೊತೆಗೆ ಮೈಸೂರು ಜಿಲ್ಲೆಯಲ್ಲಿ ಬರುವ ಈ ಸಮುದಾಯದ ಹೆಚ್ಚಿನ ಜನರು ಮೈಸೂರಿನ ಕೈಗಾರಿಕಾ ಪ್ರದೇಶವಾದ ಏಕಲವ್ಯ ನಗರದಲ್ಲಿ ಸುಮಾರು ೧೫೦ ಕ್ಕಿಂತಲೂ ಹೆಚ್ಚಿನ ಕುಟುಂಬಗಳು ವಾಸವಾಗಿವೆ.

ಶಿಳ್ಳೇಕ್ಯಾತ ಸಮುದಾಯವು ತನ್ನ ವೃತ್ತಿಯಾದ ಗೊಂಬೆ ಆಟ ಅದರೊಂದಿಗೆ ಕೆಲವೊಂದು ಬೀದಿನಾಟಕ ಹಾಗೂ ಭಿಕ್ಷೆ ಬೇಡುವುದನ್ನು ತಮ್ಮ ಕಸುಬನ್ನಾಗಿ ಮಾಡಿಕೊಂಡು ಜೀವನ ನಡೆಸುತ್ತಿದ್ದಾರೆ.

**ಮೂಲ:** ಐಯ್ಯರ್ ಮತ್ತು ನಂಜುಂಡಯ್ಯರವರ ವರದಿ ಪ್ರಕಾರ 'ಕಿಳ್ಳೇಕ್ಯಾತ' ಎಂಬ ಪದವನ್ನು ಬಳಸಿದ್ದು ಕಿಳ್ಳೇ ಎಂದರೆ ಕೀಟಲೆ, ತುಂಟ ಎಂಬುದಾಗಿದ್ದು 'ಕ್ಯಾತ್' ಎಂದರೆ ಮೋಸದ, ಕುಟೀಲ ಎಂಬ ಅರ್ಥವನ್ನು ಕಲ್ಪಿಸಿದ್ದಾರೆ. ಇದು ಚರ್ಚಾದಾಯಿಕವಾಗಿದ್ದು ಇವರನ್ನು ತೊಗಲುಗೊಂಬೆ ಆಡಿಸುವವರು ಎಂಬುದನ್ನು ಅವರು ಮನದಟ್ಟಾಗಿಸಿದ್ದಾರೆ.

ಮರಾಠಿಯಲ್ಲಿ ಇವರನ್ನು 'ಖೇಲ್ ಕೆಟ್' ಎಂದರೆ ಆಟ ಆಡುವವರು ಎಂದು ಹಾಗೆ ಇದನ್ನು 'ಕಾಳಿಕ್ಯಾತ್' ಎಂಬ ನಾಮದಿಂದಲೂ ಕರೆಯುವುದುಂಟು ಕಾರಣ ಕಾಳಿಕಾದೇವಿಯ ಯುಗದ ಬಗ್ಗೆ ತಮ್ಮ ಬೀದಿನಾಟಕದಲ್ಲಿ ಹಲವು ಪುರಾಣಗಳ ದೃಶ್ಯಗಳನ್ನು ಜನರಿಗೆ ತೋರಿಸುವುದರಿಂದ ಅವರನ್ನು ಕಾಳಿಕ್ಯಾತ್ ಎಂಬ ಪದನಾಮದಿಂದಲೂ ಕರೆಯುವುದುಂಟು ಆದರೆ ಮಹಾರಾಷ್ಟ್ರ (ಪುಣೆಗೆ/ಜೆಟ್ ಳಳಲ-ಳಳ೯) ರ ಪ್ರಕಾರ ಇವರನ್ನು 'ಚಿತ್ರಕಥಾ' ಎಂಬ ನಾಮದಿಂದ ಕರೆಯಲ್ಪಡುತ್ತಾರೆ ಎಂಬುದನ್ನು ಗುರುತಿಸಿದ್ದಾರೆ. ಎಂದರೆ ಇವರು ಹಲವು ಪುರಾಣ ಮತ್ತು ಕಥೆಗಳನ್ನು ತಮ್ಮ ಅಭಿನಯದಿಂದ ಮತ್ತು ಜನರಿಗೆ ಚಿತ್ರಗಳನ್ನು ತೋರಿಸುವುದರ ಮುಖಾಂತರ ಜನರಿಗೆ ಕಥೆಯಸಾರವನ್ನು ತಿಳಿಸುವುದರಿಂದ ಇವರನ್ನು 'ಚಿತ್ರಕಥಾ' ಪದನಾಮದಿಂದ ಕರೆಯಲ್ಪಡುತ್ತದೆ. ಇನ್ನು ಮೈಸೂರು ಸರಕಾರ ಗುರುತಿಸಿದಂತೆ ಈ ಒಂದು ಪ್ರಾಂತ್ಯದಲ್ಲಿ "ಶಿಳ್ಳೇಕ್ಯಾತರು" ಎಂಬ ಪದದಿಂದಲೇ ಇಲ್ಲಿಯ ಜನ ಪರಿಚಿತರಾಗಿರುವ ಈ ಜನಾಂಗ 'ಶಿಳ್ಳೇ' ಎಂದರೆ ಸೀಟಿ, ಬಾಯಿಂದ ಹೊರಹಾಕುವ ಧ್ವನಿ ಎಂದು 'ಕ್ಯಾತರು' ಎಂದರೆ 'ಪ್ರಸಿದ್ಧಿ' ಎಂಬ ಅರ್ಥವನ್ನು ಕಲ್ಪಿಸಲಾಗಿದೆ ಎಂದರೆ ಇವರು ಹಿಂದಿನ ಕಾಲದಲ್ಲಿ ರಾಜಮಹಾರಾಜರ ಗೂಢಾಚಾರರಾಗಿದ್ದು ಅಲ್ಲಿಯ ಸನ್ನಿವೇಶಕ್ಕನುಗುಣವಾಗಿ ಕೆಲವು ಧ್ವನಿ ಸಂಕೇತಗಳನ್ನು ಬಳಸಿ ಅಲ್ಲಿಯ ಪರಿಸ್ಥಿತಿಯನ್ನು ತಮ್ಮವರಿಗೆ ತಿಳಿಸುವ ಸಂಕೇತಗಾರರೆಂದು ಕರೆದುಕೊಳ್ಳುತ್ತಾರೆ.

ಒಟ್ಟಾರೆ ಈ ಮೇಲಿನ ಹಲವು ಪದನಾಮಗಳಿಂದ ಕರೆಸಿಕೊಳ್ಳುವ ಈ ಜನರು ಒಂದೇ ಸಮುದಾಯಕ್ಕೆ ಸೇರಿದವರೆಂದು ಗುರುತಿಸಲಾಗುತ್ತದೆ. ಕಾರಣ ಇವರೆಲ್ಲರ ವೃತ್ತಿ ಒಂದೇ ಹಾಗೂ ಅವರ ಆಚಾರ-ವಿಚಾರ ಮತ್ತು ಭಾಷೆ ಒಂದೇ ಆಗಿರುವುದರಿಂದ ಆಯಾ ಪ್ರಾಂತ್ಯಕ್ಕನುಗುಣವಾಗಿ ಇವರನ್ನು ಆಯಾ ಹೆಸರುಗಳಿಂದ ಅಲ್ಲಿನ ಜನರಿಗೆ ಚಿರಪರಿಚಿತರಾಗಿದ್ದಾರೆ. ಆದರೆ ಇವರೆಲ್ಲರಲ್ಲಿ ಕಾಣಸಿಗುವ ಹೋಲಿಕೆಯೆಂದರೆ ಇವರ ಮೂಲ ಕೆಲಸ ತೊಗಲು ಗೊಂಬೆ ಆಟ. ಈ ಆಟವನ್ನು ಆಡಿಸುವುದರ ಮುಖಾಂತರ ಸ್ಥಳೀಯ ವ್ಯಕ್ತಿ, ರಾಜರುಗಳು ಹಾಗೂ ಪುರಾಣ ಕಥೆಗಳನ್ನು ಬಿತ್ತರಿಸುವುದು ಇವರ ಕಸುಬಾಗಿದೆ. ಹೀಗಿರುವುದರಿಂದ ಇವರು ಯಾವುದೇ ಹೆಸರಿನಿಂದ ಗುರುತಿಸಿದರೂ ಇವರೆಲ್ಲಾ ಒಂದೇ ಜನಾಂಗಕ್ಕೆ ಸೇರಿದವರೆಂಬುದರಲ್ಲಿ ಯಾವುದೇ ಸಂದೇಹವಿಲ್ಲ.

**ಮೂಲಸ್ಥಳ ಮತ್ತು ಜನಾಂಗದ ಪ್ರಸಾರ:** ಇವರ ಇತಿಹಾಸವನ್ನು ನೋಡಿದಾಗ ಯಾವುದು ಸರಿಯಾದ ಮತ್ತು ನಿಖರವಾದ ಪ್ರದೇಶ/ಸ್ಥಳ ಗೊತ್ತಿಲ್ಲ ಆದರೆ

'ಎಂಥೋವೆನ್ (Enthoven) ಇವರ ಬರವಣಿಗೆಯನ್ನು ಗಮನಿಸಿ ಪರಿಶೀಲಿಸಿದಾಗ ಶಿಳ್ಳೇಕ್ಯಾತರು ಷರೀಯ ಧರ್ಮಕ್ಕೆ ಸೇರಿದವರಾಗಿದ್ದು ಹಲವಾರು ಯುದ್ಧಗಳಿಂದ ತತ್ತರಿಸಿ ಹರಿದು -ಹಂಚಿ ಹೋಗಿದ್ದು ಗುಡ್ಡ ಗಾಡನ್ನು ಸೇರಿ ಮುಂದೆ ಭಿಕ್ಷೆ ಬೇಡುತ್ತಾ ಆ ಪ್ರದೇಶಗಳಲ್ಲಿ ತಮ್ಮಂದೆ ಆದ ನೆಲೆಯನ್ನು ಮಾಡಿಕೊಂಡು ಜೀವನ ಸಾಗಿಸುತ್ತ ಬಂದವರು ಆದರೆ ಇವರಲ್ಲಿ ಹಲವಾರು ಕನ್ನಡಿಗರ ಗುಣಗಳಿರುವುದರಿಂದ ಬಹುಶಃ ಕರ್ನಾಟಕದವರಿರಬಹುದು ಎಂಬ ಊಹೆಯನ್ನು (Kshatriya Rank 1922:231) ಮಾಡುತ್ತಾರೆ. ಆದರೆ ನಂಜುಂಡಯ್ಯ ಮತ್ತು ಐಯ್ಯರ್‌ರವರು ಹೇಳುವಂತೆ (ಬೆಳಗಾವ್‌ಗೆಜೆಟ್) ಇವರು ಮರಾಠಿ ಮಾತನಾಡುವುದರಿಂದ ಮಹಾರಾಷ್ಟ್ರದ 'ಸತಾರಾ' (೧೯೩೦ :೫೧೭) ಎಂದರೆ ಕೋಲ್ಹಾಪುರ್ ಜಿಲ್ಲೆಯಿಂದ ಬಂದವರು ಎಂದು ತಿಳಿಸುತ್ತಾರೆ. ಆದರೆ ಅತ್ಯಂತ ಹಳೆಯ deed ಸನ್ನಾದ (Sannad) ಕಾರ್ತಿಕ ಮಾಸ ಎಂದರೆ ಅಕ್ಟೋಬರ್ ಪಾಸ್ಥಿ ನವೆಂಬರ್ ೯೩೦ ಎಂದರೆ ಎರಡನೇ A.D.1520 ಎರಡನೇ ಬಿಜಾಪುರ ಅರಸು (ನಂಜುಂಡಯ್ಯ ಮತ್ತು ಐಯ್ಯರ್) ಈ ಒಂದು ಟಿಪ್ಪಣಿ ಪ್ರಕಾರ ಬಿಜಾಪುರ ಜಿಲ್ಲೆಯಲ್ಲಿ ಇವರನ್ನು "ಚಿತ್ರಕಥಾ" ಎಂಬ ಹೆಸರಿನಿಂದ ಕರೆಯಲ್ಪಡುತ್ತಿದ್ದು ಇವರು ಕೊಲ್ಹಾಪುರದ ಸತಾರದಿಂದಾಗಲಿ ಅಥವಾ ಬೆಳಗಾವಿಯಿಂದಾಗಲಿ ಬಂದವರಲ್ಲಾ ಹಾಗೆ ಮೈಸೂರಿನಿಂದಲೂ ಬಂದವರಲ್ಲ ಎಂದು ಮೈಸೂರು ಗೆಜಟ್‌ನಲ್ಲಿ ತಿಳಿಸಿದ್ದು ೧೯೪೪-೧೮೮೮). ಪುಣೆ ಗೆಜೆಟ್‌ನ್ನು ನೋಡಿದಾಗ ಇವರು ಎಲ್ಲಿಂದಲೂ ಬಂದವರಲ್ಲ ಇವರು ಮೂಲತಃ ಬಿಜಾಪುರದವರು ಎಂಬುದನ್ನು ಖಚಿತಪಡಿಸುತ್ತಾರೆ.

ಆದರೆ ಅವರ ವೇಷ-ಭೂಷಣ ಹಾಗೂ ಭಾಷೆಯನ್ನು ಗಮನಿಸಿದಾಗ 'ಎಂಥೊವೆನ್'ರವರು ಹೇಳಿದ ಹಾಗೆ ಬಹುಶಃ ಮಹಾರಾಷ್ಟ್ರದಿಂದಲೇ ಬಂದಿರಬಹುದು ಎಂದೆನಿಸುತ್ತದೆ. ಆದರೆ ಭಾರತದ ಇತಿಹಾಸವನ್ನು ನೋಡಿದರೆ ರಾಜಾಸ್ಥಾನದಲ್ಲಿಯೂ ಸಹ ಇವರ ಹಾಗೆ ತೊಗಲುಗೊಂಬೆಯಾಟ ತುಂಬಾ ಪ್ರಸಿದ್ಧಿ ಪಡೆದಿದ್ದು ಮೊಗಲರ ಯುದ್ಧ ಹಾಗೂ ರಾಣಾ ಷತಾಪ್‌ಸಿಂಹನ ಹತ್ಯೆಯ ನಂತರ ಅಲ್ಲಿನ ಜನ ಸಮುದಾಯ ಭಾರತದ ಮೂಲೆ ಮೂಲೆಗೂ ಪ್ರಸರಿಸಿದರು. ಅದರಲ್ಲಿ ಒಂದು ಗುಂಪು ಮರಾಠವಾಡದ ಶಿವಾಜಿಯ ಸೈನ್ಯದಲ್ಲಿ ಸೈನಿಕರಾಗಿ ಹಾಗೂ ಗೂಢಚಾರರಾಗಿ ಕೆಲಸ ಗಿಟ್ಟಿಸಿಕೊಂಡು ಜೀವನ ಸಾಗಿಸುತ್ತಿದ್ದರು ಮುಂದೆ ಶಿವಾಜಿಯ ಅಂತ್ಯದ ನಂತರ ಮತ್ತೆ ಅದೇ ಅಲೆಮಾರಿ ಜೀವನ.

ಹೀಗಾಗಿ ಒಂದು ಮಾತಂತು ಸತ್ಯ ಇವರು ಭಾರತದವರು. ಹೀಗಾಗಿ ಇವರ ಜನಾಂಗದ ಬಗ್ಗೆ ನಿಖರವಾದ ಮಾಹಿತಿ ದೊರೆಯದೆ ಇರುವುದರಿಂದ ಬಹುಶಃ ನಂಜುಂಡಯ್ಯ ಮತ್ತು ಐಯ್ಯರ್‌ರವರ ಹೋಲಿಕಾ ಸಿದ್ಧಾಂತ ಒಂದಡೆಯಾದರೆ ಇನ್ನೊಂದೆಡೆ ಪಾಂಡವರ ಉದಾಹರಣೆಯನ್ನು ಇಟ್ಟುಕೊಂಡು ಇವರು ಕ್ಷತ್ರಿಯ ಎಂದು ಮಧ್ಯಭಾರತದಿಂದ ಬಂದವರು ಎಂಬ ಎಂಥೋವೆನ್ ವಾದವು ಚರ್ಚಾಸ್ಪದವಾಗಿವೆ. ಆದರೆ ಇವರಿಬ್ಬರ ವಾದ-ವಿವಾದದ ಮಧ್ಯೆ ಇಲ್ಲಿ ಸ್ಥಳೀಯವಾಗಿ ವಾಸವಾಗಿರುವ ವೃದ್ಧ ಶಿಳ್ಳೇಕ್ಯಾತರನ್ನು ಕೇಳಿದಾಗ ನಮ್ಮ ಪೂರ್ವಜರು ರಾಜಾಸ್ಥಾನದಿಂದ ಬಂದವರು. ಆದರೆ ಮುಂದೆ ಕೆಟ್ಟ ಸಮಯದ ಪರಿಣಾಮ ನಮ್ಮವರು ಮಹಾರಾಷ್ಟ್ರ ಸೇರಿಕೊಂಡರು. ಅಲ್ಲಿಯೂ ಅದೇ ರೀತಿ ಸಮಸ್ಯೆ ಎದುರಾಗಿದ್ದುದರಿಂದ ಕರ್ನಾಟಕದ ಮೂಲೆ-ಮೂಲೆಯಲ್ಲಿ ನಮ್ಮವರು ನೆಲೆ-ನಿಂತಿದ್ದಾರೆ ಎಂಬುದಾಗಿ ತಿಳಿಸುತ್ತಾರೆ. ಹೀಗಾಗಿ ಅವರ ಈಗಿರುವ ವೇಷ-ಭೂಷಣ ಮತ್ತು ಅವರ ಭಾಷೆಯನ್ನು ಗಮನಿಸಿದಾಗ ಅವರು ಮೂಲ ಕೊಲ್ಹಾಪುರದ ಸತಾರ ಎಂಬುದು ಖಚಿತವಾಗುತ್ತದೆ.

ಮೈಸೂರಿನ ಏಕಲವ್ಯ ನಗರದಲ್ಲಿ ವಾಸವಾಗಿರುವ ಶಿಳ್ಳೇಕ್ಯಾತರು ಇವರು ಮೂಲತಃ ತಮಿಳುನಾಡಿನಿಂದ ಬಂದವರೆಂದು ಹೇಳಿದರೂ ಅವರು ತಮ್ಮ ಎಲ್ಲಾ ಸಂಬಂಧಿಕರು ಶಿವಮೊಗ್ಗ, ಕಾರಾವಾರ, ಬಿಜಾಪುರ ಮತ್ತು ಬೆಳಗಾವಿಯಲ್ಲಿ ಹೆಚ್ಚಿನವರು ಇದ್ದಾರೆ. ನಮ್ಮ ಕೆಲವು ಸಂಬಂಧಿಕರು ತಮಿಳುನಾಡಿನಲ್ಲಿದ್ದರೂ ನಾವು ಅವರ ಸಂಗಡ ಯಾವುದೇ ವೈವಾಹಿಕ ಸಂಬಂಧಗಳು ಇಟ್ಟುಕೊಂಡಿಲ್ಲ ಎಂಬ ಮಾತುಗಳು ಅಲ್ಲಿರುವ ವೃದ್ಧ ವ್ಯಕ್ತಿಗಳಿಂದ ತಿಳಿದುಬರುತ್ತದೆ.

**ಐತಿಹಾಸಿಕ ಮತ್ತು ಪೌರಾಣಿಕ ಹಿನ್ನಲೆ**

ಶಿಳ್ಳೇಕ್ಯಾತ ಜನಾಂಗಕ್ಕೆ ಸಂಬಂಧಿಸಿದಂತೆ ಹಲವಾರು ದಂತಕಥೆಗಳು, ಪುರಾಣಗಳು ಕೇಳಿಬರುತ್ತವೆ. ಅದೇ ಜನಾಂಗದ ಹಿರಿಯರನ್ನು ಕೇಳಿದಾಗ ಒಬ್ಬರೊಬ್ಬರು ಒಂದೊಂದು ರೀತಿಯಲ್ಲಿ ಕಥೆಯನ್ನು ಹೇಳುತ್ತಾರೆ. ಆದರೆ ಅದರಲ್ಲಿ ಯಾವುದೇ ರೀತಿಯ ಜಾತಿ ಮತ್ತು ಕಥೆಗೆ ಹೋಲಿಕೆಯೇ ಇರುವುದಿಲ್ಲ ಆದರೆ ಅವರು ರಾಮನ ಅವತಾರ ಕೃಷ್ಣನ ಅವತಾರ ಎನ್ನುವ ರೀತಿಯಲ್ಲಿ ಅವರ ಜನಾಂಗದ ಹಿನ್ನೆಲೆಯನ್ನು ಹೇಳುತ್ತಾ ಹೋಗುತ್ತಾರೆ. ಈ ಜನಾಂಗಕ್ಕೆ ಸಂಬಂಧಿಸಿದಂತೆ ಹಲವಾರು ಸಂಶೋಧಕರು, ಪತ್ರಕರ್ತರು ಹಲವಾರು ಲೇಖನಗಳನ್ನು ವಿಷಯವನ್ನು ಕಲೆಹಾಕಿ ಬರೆದಿದ್ದಾರೆ. ಅದರಲ್ಲಿ ಪ್ರಮುಖರಾದ ಡಾ.ಸಣ್ಣವೀರಣ್ಣ ದೊಡ್ಡಮನಿ ಮತ್ತು ಪಿ. ಮಹೇಂದರ್‌ರಾವ್ ಸಾಸ್‌ನೀಕರವರು ತಮ್ಮ ಶಿಳ್ಳೇಕ್ಯಾತ್ ಎಂಬ ಗ್ರಂಥದಲ್ಲಿ ಈ

ರೀತಿಯಾಗಿ ಶಿಳ್ಳೇಕ್ಯಾತರ ಬಗ್ಗೆ ಹಿನ್ನಲೆಯನ್ನು ಕೊಟ್ಟಿದ್ದಾರೆ. "ಈ ಸಮುದಾಯದವರ ಪುರಾಣದ ಪ್ರಕಾರ ಇವರು ಮೊದಲು ಗಂಗಾನದಿಯ ಬಯಲುಗಳಲ್ಲಿ ವಾಸವಾಗಿದ್ದರು. ಅಲ್ಲಿಯ ಹಸ್ತಿನಾವತಿಯ ಚಕ್ರವರ್ತಿಯಾದ ಶಂತನು ಬೇಟೆಗೆ ಬಂದಿದ್ದಾಗ ಈ ಸಮುದಾಯದ ಚಲುವೆಯಾದ ಸುಗಂಧಗೆ ಮನಸೋತು ಅವಳನ್ನು ವಿವಾಹವಾಗಲು ನಿರ್ಧರಿಸುತ್ತಾನೆ. ಮತ್ಸ್ಯಗಂಧಿಯು ಅಂದಿನ ಕಾಲದ ಹೆಣ್ಣು ಮಕ್ಕಳಿಗೆ ಸಹಜವಾಗಿದ್ದ ಹೆಣ್ತನದ ಏಕೈಕ ಆಭರಣವಾಗಿರುವ ನಾಚಿಕೆಯಿಂದ ಕೂಡಿದ್ದು ಆಕೆಯ ಸೌಂದರ್ಯಕ್ಕೆ ಮನಸೋತು ಶಂತನ ಅಭಿಪ್ರಾಯಕ್ಕೆ ಮತ್ಸ್ಯಗಂಧಿಯು ಜನಪದ ಮುಗ್ಧತೆಯ ಪ್ರತೀಕವಾದ ಉತ್ತರವನ್ನು ನೀಡುತ್ತಾಳೆ. ನನಗಿಂತ ಮುಖ್ಯ ನನ್ನ ತಂದೆಯವರ ಅಭಿಪ್ರಾಯ. ಅವರು ಒಪ್ಪುವುದಾದರೆ ಆಗಲಿ ಎನ್ನುತ್ತಾಳೆ. ಹಾಗೆ ತನ್ನ ಸೌಜನ್ಯವನ್ನು ವ್ಯಕ್ತಪಡಿಸುತ್ತಾಳೆ. ಆಗ ಸುಗಂಧೆಯ ತಂದೆ 'ಚಕ್ರವರ್ತಿ ನನ್ನ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳಿಗೆ ಪಟ್ಟ ಕಟ್ಟುವುದಾದರೆ ಮಾತ್ರ ನನ್ನ ಮಗಳನ್ನು ನಿಮಗೆ ಧಾರೆ ಎರೆಯುತ್ತೇನೆ ಇಲ್ಲದಿದ್ದರೆ ಇಲ್ಲ' ಎಂದು ಹೇಳುತ್ತಾನೆ. ಆಗ ಶಂತುವಿನ ಮಗನಾದ ದೇವದ್ರತ ಶಪಥ ಮಾಡಿ ತಾನೇ ಮುಂದೆ ನಿಂತು ತಂದೆಯ ಮದುವೆ ಮಾಡುವ ಪ್ರಸಂಗವಿದೆ.

ಈ ಸಮುದಾಯದವರು ಗಂಗಾಪುತ್ರ ಭೀಷ್ಮ ಮತ್ತು ಕರ್ಣನ ಬಗ್ಗೆ ಮಾತನಾಡುತ್ತಾ ಅವರು ನಮ್ಮ ಜನಾಂಗದವರು ಕರ್ಣನನ್ನು ಸಾಕಿ ಬೆಳೆಸಿದವರು ನಾವು, ದ್ರೋಣಾಚಾರ್ಯರು ತನ್ನ ಶಿಷ್ಯನಾದ ಅರ್ಜುನನನ್ನು ಕುರಿತು ಹಾಗೂ ಅವನ ಧನುರ್ಧಾರಿ ವಿದ್ಯೆಯಲ್ಲಿ ತುಂಬಾ ಅತ್ಯುತ್ತಮ ಅವನನ್ನು ಮೀರಿಸುವವನು ಯಾರೂ ಇಲ್ಲ ಎಂದು ಹೇಳುವಾಗ ಕರ್ಣನು ಅರ್ಜುನನ್ನು ಹೊಗಳುವುದು ಮೂರ್ಖತನ ಅವನಿಗಿಂತಲೂ ನನಗೆ ಹೆಚ್ಚಿನ ವಿದ್ಯೆ ಗೊತ್ತು, ನಾನು ಅವನಿಗಿಂತಲೂ ಪರಿಣಿತನು ಎಂದಾಗ, ಪಾರ್ಥನಿಗೆ ಕೋಪ ಬಂದು ಕರ್ಣನ ಬಗ್ಗೆ ಇಲ್ಲ ಸಲ್ಲದ ಮಾತುಗಳನ್ನಾಡುತ್ತಾ ನಿನಗೇನು ಗೊತ್ತು? ಧನುರ್ವಿದ್ಯೆ ಬಗ್ಗೆ ನೀನೊಬ್ಬ ಅಂಬಿಗರವನು, ಬೆಸ್ತನು, ಮೀನು ಮಾರುವವನು ನೀನು ನನಗೆ ಸರಿಸಾಟಿಯೇ? ಎಂಬ ಜಂಬದ ಮಾತುಗಳನ್ನಾಡುವ ಸನ್ನಿವೇಶವನ್ನು ಇವರು ಹಾಡುಗಳು ಹಾಗೂ ಕಥೆಗಳ ಮುಖಾಂತರ ವಿವರಿಸುತ್ತಾರೆ. ಹಾಗೆ ಇದೆ ಕಥೆಯನ್ನು ಕಬ್ಬಲಿಗ ಜನಾಂಗದ ಹಲವಾರು ಹಿರಿಯರು ಈ ಕಥೆಯನ್ನು ಹೇಳುವುದು ರೂಢಿಯಲ್ಲಿದೆ.

ಹಾಗೇ ಈ ಜನಾಂಗದ ಪ್ರಾಚೀನತೆಯ ಬಗ್ಗೆ ವಿವರಿಸುತ್ತಾ ಡಾ. ದೊಡ್ಡಮನಿ ಅವರು "ಇದು ಬ್ರಹ್ಮನಿಂದ ಸರಸ್ವತಿಯ ಮನರಂಜನೆಗಾಗಿ ಸೃಷ್ಟಿಯಾದ ಕಲೆ

ತೊಗಲುಗೊಂಬೆಯಾಟ ಎಂದು ಹೇಳುತ್ತಾರೆ. ಇನ್ನು ಕೆಲವರು "ರಾಮನು ತಾನು ಭೂಲೋಕವನ್ನು ತ್ಯಜಿಸುವ ಸಂದರ್ಭದಲ್ಲಿ ರಾಮನ ಸಹಚರರಾದ ಇವರು ನಮ್ಮನ್ನು ಹೀಗೆ ಬಿಟ್ಟು ಹೋದರೆ ಹೇಗೆ? ನಮಗೆ ಬದುಕಲು ದಾರಿ ಮಾಡಿಕೊಡಬೇಕು ಎಂದು ಪ್ರಾರ್ಥಿಸಿಕೊಂಡಾಗ ರಾಮನು ತನ್ನ ಕೈಯಲ್ಲಿನ ಜಿಂಕೆ ಚರ್ಮ ನೀಡಿ ಅದರಲ್ಲಿ ತನ್ನ ಪ್ರತಿರೂಪವನ್ನು ಚಿತ್ರಿಸಿ ತೊಗಲುಗೊಂಬೆ ಮಾಡಿ ಈ ತೊಗಲುಗೊಂಬೆಯಾಟ ಆಡಿಸಿ ಬದುಕಿ ಬಾಳಿರಿ ಎಂದು ಹೇಳಿದ ಅಂದಿನಿಂದ ನಾವು ಗೊಂಬೆ ರಾಮನಾಗಿ, ತೊಗಲುಗೊಂಬೆಯಾಟವನ್ನು ಆಡಿಸುತ್ತಾ ನಮ್ಮ ಉಪಜೀವನವನ್ನು ನಡೆಸುತ್ತಿದ್ದೇವೆ ಎಂದು ಹೇಳುತ್ತಾರೆ.

ಇನ್ನು ಕೆಲವು ಶಿಳ್ಳೇಕ್ಯಾತರು "ತನಗೂ ತನ್ನ ಅಣ್ಣನಿಗೂ ಆದ ಅನ್ಯಾಯದ ಸೇಡು ತೀರಿಸಿಕೊಳ್ಳಲು ಬಂದ ಶೂರ್ಪನಖಿಯ ಕಪಟ ಮಾತುಗಳಿಗೆ ಮರುಳಾಗಿ ಅವಳ ಬೇಡಿಕೆಯಂತೆ ಸೀತೆ ರಾವಣನ ಚಿತ್ರ ಬರೆದುಕೊಡುತ್ತಾಳೆ. ಲೋಕದ ಮೇಲೆ ಗೊಂಬೆಯಾಡಿಸಿ ಜೀವನ ಮಾಡುತ್ತೇನೆಂದಿದ್ದ ಶೂರ್ಪನಖಿ ನಂತರ ಸಬೂಬು ಹೇಳಿ ಗೊಂಬೆಯನ್ನು ಅಲ್ಲಿಯೇ ಬಿಟ್ಟು ಹೋಗುತ್ತಾಳೆ, ಸೀತೆ ಬಚ್ಚಿಟ್ಟ ಈ ಗೊಂಬೆ ನಂತರ ರಾಮನ ಗಮನಕ್ಕೆ ಬಂದು ಆತ ಸೀತೆಯ ನಿಷ್ಠೆಯ ಬಗೆಗೆ ಅನುಮಾನಿಸಿ ಗರ್ಭಿಣಿಯನ್ನು ಕಾಡಿಗೆ ಅಟ್ಟುತ್ತಾನೆ. ಅಂದಿನಿಂದ ಸೀತೆಯಿಂದಲೇ ಗೊಂಬೆ ನಿರ್ಮಾಣದ ಸಂತತಿ ಮುಂದುವರಿಯಿತು ಎನ್ನುತ್ತಾರೆ.

ಇನ್ನೂ ಬರಮಪ್ಪನವರ ಪ್ರಕಾರ "ಪರದೇಶಿ ಗತಿಯಿಲ್ಲದವ ನಮ್ಮ ಜನದವನೇ ಊರೂರು, ಮನೆ ಮನೆ ತಿರುಗಿ ಕಥೆಗಳನ್ನು ಹೇಳಿ ನಿಮ್ಮಂಥ ಯಜಮಾನರು ಮಾಹರಾಯರು ಹತ್ತಿರ ಹತ್ತು ಪೈಸೆ, ಇಪ್ಪತ್ತುಪೈಸೆ, ಆಣೆ ಎಂಟಾಣೆ ಇಸ್ಕಂಡು ಒಂದು ಸೇರ ಅಕ್ಕಿ ತಂದು, ಬ್ಯಾಳಿ ತಂದು, ಅನ್ನದ ಛತ್ರ ಕುಡ ನಡಸ್ತಿದ್ನಂತೆ. ಅದೇ ಒಂದು ಸೇರು ಅನ್ನದಲ್ಲೇ ಎಷ್ಟು ಜನ ಉಂಡ್ರೂ ಅನ್ನ ಸವೀತಿರಲಿಲ್ಲ. ಅಷ್ಟು ಹುಲುಸಿ ಬರುತ್ತಿತ್ತು. ಅದಕ್ಕೋಸ್ಕರ ಭಗವಂತನು ನೀನು ಹುಲುಸೀನ ಮಗನಾಗಿ ಈ ಭೂಮಿ ಮೇಲೆ ಕಲಿಯುಗದಲ್ಲಿ ಕ್ಯಾತ ಪುರುಷನಾಗಿ ಬಾಳು ಅಂತ್ಹೇಳಿ ಹರ್ಕೆ ಕೊಟ್ಟು ಕಳಿಸ್ಯಾನ. ಇದರಿಂದಾಗಿ ಕಲಿಪುರುಷ ಶಿಳ್ಳೇಕ್ಯಾತ ಈ ಹೆಸರು ಬಂದಿತೆಂದು ಖ್ಯಾತ ತೊಗಲು ಗೊಂಬೆ ಆಟದ ಕಲಾವಿದರಾದ ಈ ವ್ಯಕ್ತಿ ತಮ್ಮ ಶಿಳ್ಳೇಕ್ಯಾತ ಜನಾಂಗದ ಬಗ್ಗೆ ಹೆಮ್ಮೆಯಿಂದ ಹೇಳುತ್ತಾರೆ.

ಇನ್ನು ಏಕಲವ್ಯನಗರ ಹನುಮಂತಪ್ಪ ತಮ್ಮ ಜನಾಂಗದ ಬಗ್ಗೆ ವಿವರಿಸುತ್ತಾ ನೋಡ್ರಿ ಸರ್ ನಮ್ಮ ಜನಾಂಗದ ಬಗ್ಗೆ ಸಾಕಷ್ಟು ಕಥೆಗಳು ಹೇಳಿದ್ದರೂ ನಮ್ಮವ್ರೂ

ಎಲ್ಲರೂ ಹೇಳುವುದು ಒಂದೇ ಒಂದು ಕಥೆಯೆಂದರೆ ಆಕಾಶದಾಗ ಪರಮಾತ್ಮ ಎಲ್ಲರಿಗೂ ಊಟಕ್ಕೆ ಹಾಕಿದ್ದ ಅಲ್ಲಿ ಪಂತಿಯೊಳಗ ಎಲ್ಲರಿಗೂ ಜಾಗಸಿಕ್ಕು ಎಲ್ಲರೂ ಊಟ ಮಾಡಲು ಕುತ್ತಿದ್ರು ಆದರೆ ಬ್ರಾಹ್ಮಣರಿಗೆ ಜಾಗ ಸಿಕ್ಕಿರಲಿಲ್ಲ ಅಷ್ಟಾರಾಗ ಪರಮಾತ್ಮ ಒಂದು ಚಿಗುರಿಬಿಟ್ಟ ಆಗ ನಮ್ಮ ಜನಾಂಗದವರು ಮೃಷ್ಟಾನ್ನ ಬೋಜನ ಬಿಟ್ಟು ಜಿಂಕಿಗೆ ಹೊಡ್ಯಾಕ್ ಬೆನ್ನ ಹತ್ತಿಹೋದರು. ಅದೇ ಜಾಗಕ್ಕೆ ಬ್ರಾಹ್ಮಣರು ಕುತ್ತರು. ಆಗ ನಮ್ಮವರು ಜಿಂಕಿ ಹೊಡ್ಯಾಕ್ ಹೋಗಿದ್ದವರಿಗೆ ಜಿಂಕೆ ಸಿಗಲಿಲ್ಲ. ಆಗ ಹೊಟ್ಟೆ ಹಸಿದು ಮತ್ತೆ ವಾಪಾಸ್ ಬಂದಾಗ ಅಲ್ಲಿ ಬೇರೆಯವರು ಊಟಕ್ಕ ಕೂತಿದ್ರು ನಮಗೆ ಜಾಗ ಇರಲಿಲ್ಲ ಅದಕ್ಕ ಪರಮಾತ್ಮಗ ಕೇಳಿದ್ರ ಅವನು ಮಕ್ಕಳೆ ನೀವು ಹಾಗೆ ಕಾಡು-ಕಾಡು ತಿರುಗಾಡುತ್ತಾ ಹೋಗ್ರಿ. ಅಲ್ಲಿ ಇಲ್ಲಿ ಭಿಕ್ಷೆ ಬೇಡ್ರಿ ನಿಮಗೆ ಒಳ್ಳೆ ಅನ್ನ ಬ್ಯಾಡಾಗ್ಯಾದ ನೀವು ಹೋಗ್ರಿ ಎಂದು ಶ್ಯಾಪಕೊಟ್ಟ. ಹೀಗಾಗಿ ಇಂದಿಗೂ ನಮಗೆ ಮನೆ –ಮಠ ಏನೂ ಇಲ್ಲದೆ ಹಾಗೆ ಊರೂರು ಭಿಕ್ಷಾ ಬೇಡ್ಕೊಂಡು ಕಾಡಾನಾಗ ಪ್ರಾಣಿ–ಪಕ್ಷಿ, ಮೀನ ಹಿಡ್ಕೊಂಡು ಜೀವನ ಮಾಡಿತ್ತಿದ್ದೀವಿರಿಯಪ್ಪಾ ಎಂದು ಪೂರ್ವಜರಿಗೆ ಶಾಪ ಹಾಕುತ್ತಾ ತಮ್ಮ ಜಾತಿಯ ಪುರಾಣ ಕಥೆಯನ್ನು ಹೇಳುತ್ತಾರೆ.

ಡಾ. ದೊಡ್ಡಮನಿಯವರ ಪುಸ್ತಕದಲ್ಲಿ ಬರುವ ಇನ್ನೊಂದು ಶಿಳ್ಳೇಕ್ಯಾತರ ಜನಾಂಗಕ್ಕೆ ಸಂಬಂಧಿಸಿದ ಸ್ವಾರಸ್ಯಕರ ಕಥೆಯನ್ನು ನೋಡುವುದಾದರೆ, 'ಅರವತ್ತಾರು ಪುರಾತನರು ಭೂಮಿಗೆ ಬರುವಾಗ ಅವರೆಲ್ಲರೂ ಕೇಳಿದಂತೆ, ಅವರು ಒಕ್ಕಲುತನದೋರು, ಅವರು ಕುರುಬರು, ಬುಡ-ಬುಡಕೆಯರು, ಜೋಗೇರ ಜಂಗಮರು ಹೀಗೆ ಎಲ್ಲರಿಗೂ ಅವರಿಗೆ ತಕ್ಕ ಕಸಬುಕೊಟ್ಟು ಆ ಎಲ್ಲ ಪುರಾತನರಿಗೂ ಕಸುಬು ಹಂಚುವವರಿಗೆ ಇವ ಒಬ್ಬ ಸುಮ್ಮನೆ ಕುಳಿತು ಎಲ್ಲರಿಗೂ ಕೊಟ್ಟಾದ ಮೇಲೆ ಸ್ವಾಮಿಗಳೇ ನಮಗೇನು? ಎಂದನಂತೆ" ನಿನಗೆ ಕೊಡಲು ನನ್ನ ಹತ್ತಿರ ಏನೈತಿ ಎಲ್ಲರಿಗೂ ಕೊಟ್ಟದ್ದಾಯಿತು ಎಂದು ಒಂದು ಹುಲಸಿನ ಪುಟ್ಟಿ ಇದೆ ನೊಡು ಎಂದನಂತೆ ಶಿವ ಹುಲಸಿನ ಪುಟ್ಟಿ ತಗೊಂಡು ನಾನೇನ್ ಮಾಡ್ಬೇಕು' ಎಂದ ಒಕ್ಲುಮನೆ ನಿಂದ್ಹೋಗ, ಊರ್‍ಗಿ ಕರವಗಲ್ಲಾಗು, ಬುಟ್‌ಗೆ ಬಂಟಾಗು, ರಾಶಿ ಮುಂದೆ ಬೂದಗ ಆಗು, ಕಲಿಕ್ಯಾತ ಆಗಿ ಹೊಲಕ್ಕೆದು ಸಿವುಡು ಮದಿ ಮೇಯಿ, ನಿನಗೆ ರೈತನು ಕೊಡತಾನ ಅದನ್ನು ಊಣ್ಣಾ ಕಂತ ಇವ್ನ ಐದು ಮಂದಿ ಪಾಂಡವರನ್ನ ಚಿತ್ರಪಟ ಮಾಡಿ ಆಟ ಆಡಿಕೊಂತ ಹೋಗು ಅಂತ ಕಳಿಸಿದ. ಆಗ್ಲಿ ಬಿಡ್ರಿ". ಅಂತ ವಕ್ಲು ಮಗನಿಂದ ಬಂದು ಅವನು ಎಲ್ಲ ಬೀಜ ಬಿತ್ತಿದಾಗ ಹುಳ್ಳಿ ಬೀಜವಿರಲಿಲ್ಲ. ನೀ ಹೋಗು, ನೀ ಹೋಗು ಅಂತ ಒಬ್ಬೊಬ್ಬರಿಗೆ ಹೇಳಿದ. ಈಗಾಗಲೇ ಭೂಮಿಗೆ ಬಂದು ಬಿಟ್ಟೇವಿ ಮ್ಯಾಲೆ

ಹೋಗಿ ತರಾಕೆ ಯಾರ ಕೈಲಾಗಲ್ಲ ಅಂದ್ರು ಅದರಲ್ಲಿ ಇವನಿಗೆ ಏನಪ್ಪ ಕ್ಯಾತರಡ್ಡಿ ಮತ್ತೆ ನೀ ಹೋಗ್ತೀಯೇನು ಅಂತ ಕೇಳಿದ್ರು, ಹ್ಞೂಂ ಎಂದು ಹೋದ. ಅಲ್ಲಿ ಯಾಕಪ್ಪ ಮತ್ತೆ ಹೊಳ್ಳಿ ಬಂದ್ಯೆಲ್ಲಾ? ಎಂದರು. ಹುಳ್ಳಿ ಬೀಜ ಬಿಟ್ಟೋಗ್ಯಾಯತ್ರಿ ಅದನ್ನು ತಕ್ಕೊಂಡು ಬರಾಕ ಕಳಿಸ್ಯಾರ್ರಿ ಎಂದಾಗ ಆಯ್ತು ಅವನ್ನ ವಯ್ಯಾಕ ಏನೂ ತಂದಿಲ್ಲವಲ್ಲಾ ಹುಳ್ಳಿ ಬೀಜ ಹ್ಯಾಂಗ ವೈಯಿತ್ತಿ ಅಂದ್ರಂತೆ. ಆಗ ಇವನು ಏನೂ ತರದಿದ್ರೇನಾತು ನನ್ನ ಮುಂದಿಟ್ಟು ಬಿಡ್ರಿ ನಾನೂ ಎಂಗೊ ಒಯ್ತೀನಿ. ನೀವು ನನ್ನ ನೋಡಬ್ಯಾಡ್ರಿ ಎಂದಾಗ, ಹುಳ್ಳಿ ಬೀಜ ಪುಟ್ಟು ತುಂಬಿಟ್ಟ ಶಿವ. ಇಂವ ಅವನಷ್ಟೂ ತಿಂದು ಬಂದು ಕೂರಿಗಿ ಹಿಂದಿಂದ ಅಡ್ಡಾಡಿದ ಅದ ಕೆಲದಿವಸದಲ್ಲಿ ಹುಳ್ಳಿ ಬೆಳೆಯಿತು. ಅಂದಿನಿಂದ ಸೃಷ್ಠಿ ಪುರುಷ ಕಿಳ್ಳೇಕ್ಯಾತ ಕಿಳ್ಳೇಕ್ಯಾತ, ಹುಳ್ಯಾಕೇತ, ಹುಳ್ಳಿ ಹೊಲದಾಗ್ಹೇತ ಎಂದು ಪ್ರಸಿದ್ಧಿ ಪಡೆದ ಭೂಲೋಕಕ್ಕೆ ಅನ್ನದಾತನಿಗೆ ಸಹಾಯಕನಾಗಿ ಹುಟ್ಟಿ ಬಂದವನು ಕಲಿಕ್ಯಾತ, ಅವನು ಕಲಿಕೇತ ಅವನು ಭೂಮಿಗೆ ಅನ್ನ ತಂದ ನಂದಿಯ ಸ್ವರೂಪ ಎನ್ನುತ್ತಾರೆ ದೊಡ್ಡ ಭರಮಪ್ಪ.

ಈ ಎಲ್ಲ ದಂತ ಕಥೆಗಳನ್ನು ಗಮನಿಸಿದಾಗ, ಶಿಳ್ಳೇಕ್ಯಾತರ ಮೂಲಪುರುಷ ರಾಮನೆಂದು ತಿಳಿಯುತ್ತದೆ. ಮೈಸೂರು ಟ್ರೈಬ್ಸ್ ಆ್ಯಂಡ್ ಕಾಸ್ಟ್ (ಸಂಪುಟ೨) ಗ್ರಂಥದಲ್ಲಿ ಈ ಕುಲದ ವಂಶಸ್ಥ ಮೂಲ ಪುರುಷ ಕತ್ತಾರೆ ಕಾಳಾಚಾರಿ ಎಂದು ಉಲ್ಲೇಖಿಸಿರುವರು. ಒಂದು ಸಮುದಾಯದ ಚರಿತ್ರೆಯನ್ನು ಬರೆಯುವಾಗ ಆಯಾ ಕುಲದ ಹಿರಿಯರಲ್ಲಿ ಒಂದಲ್ಲ ಹತ್ತಾರು ಬಾರಿ ಚರ್ಚಿಸಬೇಕಾಗುತ್ತದೆ. ಹೀಗಾಗಿ ಶಿಳ್ಳೇಕ್ಯಾತರಿಗೂ ಮತ್ತು ಕತ್ತಾರ ಕಾಳಾಚಾರಿಗೂ ಯಾವ ಸಂಬಂಧವೂ ಇಲ್ಲ. ಕತ್ತಾರೆ ಕಾಳಾಚಾರಿಯೂ ಪಂಚಾಳ ಜಾತಿಯ ಮೂಲಸ್ಥ, ವಂಶಸ್ಥ. ಅವನ ಕೆಲಸ ಕಟ್ಟಿಗೆಯಿಂದ ಗೊಂಬೆ ತಯಾರಿಸುವುದು. ಇವರು ಗೊಂಬೆಯಾಡಿಸುವವರೆಂದಾಕ್ಷಣ ಯಾವ ಗೊಂಬೆಯಾಡಿಸುವವರು. ತೊಗಲು ಗೊಂಬೆಯೋ ಅಥವಾ ಮರದ–ಗೊಂಬೆಯೋ? ಇವುಗಳಿಗೆ ಇರುವ ವ್ಯತ್ಯಾಸ ಅದರ ಕೃಷಿಯು ಹೇಗೆ ಎಂಬುದನ್ನು ಅರಿಯದೆ ಕ್ಷೇತ್ರಕಾರ್ಯ ಮಾಡುವಾಗ ಎಡವಿರುವರು. ಆದ್ದರಿಂದ ಅವರ ಉಲ್ಲೇಖಕ್ಕೆ ಪ್ರತಿ ಉತ್ತರವೆಂಬಂತೆ ಶಿಳ್ಳೇಕ್ಯಾತರ ಮೂಲ ಪುರುಷ ವಂಶಸ್ಥ ರಾಮನೆಂದು ಹೇಳುವುದಕ್ಕೆ ಅವರಲ್ಲಿ ದೊರೆಯುವ ಐತಿಹ್ಯಗಳಿಂದ ನಿರ್ಧರಿಸಲಾಗಿದೆ. (ಡಾ. ದೊಡ್ಡಮನಿ, ಪು. ೧೫)

ಒಟ್ಟಾರೆಯಾಗಿ ಇವರ ಇತಿಹಾಸ ಹಾಗೂ ಪುರಾಣ ಕಥೆಗಳಿಂದ ದೊರೆತ ಮಾಹಿತಿಯಂತೆ ಬೇರೆ ಜನಾಂಗಕ್ಕೂ ಇರುವಂತೆ ಇವರಿಗೂ ಒಂದು ಐತಿಹಾಸಿಕ

ಹಿನ್ನೆಲೆಯಿದೆ. ಆದರೆ ಈ ಜನಾಂಗ ಆ ಹಿಂದಿನ ಪುರಾಣ ಕಥೆಗಳನ್ನು ಬಿಟ್ಟು ಮುಂದಿನ ತಮ್ಮ ಮಕ್ಕಳ – ಮೊಮ್ಮಕ್ಕಳ ಭವಿಷ್ಯದ ಬಗ್ಗೆ ಆಲೋಚನೆ ಮಾಡಿ ತಮ್ಮದೇ ಆದ ನೆಲವನ್ನು ಹುಡುಕಿ ಒಂದೇ ಕಡೆ ನೆಲೆಯೂರುವಂತೆ ಮಾಡಬೇಕು. ಕಾರಣ ಮುಂದಿನ ಪೀಳಿಗೆಗಾದರೂ ಒಂದು ನೆಲೆಯೆನ್ನುವುದು ತಮ್ಮದೇ ಆದ ಬದುಕನ್ನು ಮಾಡಲು ಒಂದು ಅನುಕೂಲವಾಗುತ್ತದೆ. ಭಿಕ್ಷೆಯನ್ನೇ ಅವಲಂಬಿಸಿ ಜೀವಿಸು–ವುದಕ್ಕಿಂತಲೂ ತಮ್ಮದೇ ಆದ ಒಂದು ಇತಿಹಾಸವನ್ನು ಸೃಷ್ಟಿಸುವಂತೆ ಅವರಾಗಬೇಕು. ಈ ಕಥೆಗಳನ್ನು ಹರಿದು ಬಿಸಾಕಿ ತಮ್ಮದೇ ಆದ ಕಥೆಯನ್ನು ನಿರ್ಮಿಸಬೇಕು. ತಮ್ಮ ಮುಂದಿನ ಪೀಳಿಗೆಗೆ ಶಿಕ್ಷಣವನ್ನು ಕೊಟ್ಟು ಅವರ ಭವಿಷ್ಯಕ್ಕೆ ನಾಂದಿಯಾಗಬೇಕು. ಅವರ ಪ್ರಜ್ವಲ ಭವಿಷ್ಯದ ಕಥೆಯನ್ನು ರೂಪಿಸಬೇಕು.

# ಅಧ್ಯಾಯ ಮೂರು
# ಸಾಮಾಜಿಕ ಜೀವನ

ಮಾನವ ಸಂಘಜೀವಿ. ಅವನು ಒಂಟಿಯಾಗಿ ಬಾಳಲಾರ. ಬುದ್ಧಿಜೀವಿ–ಯಾದ ಮಾನವನಿಗೆ ಸಮಾಜ, ಸಂಘ, ಸಮೂಹ ಎನ್ನುವ ಅರಿವುಯಿರುವುದರಿಂದ ಅವನು ಒಬ್ಬಂಟಿಗನಾಗಿ ಬಾಳಲು ಇಷ್ಟಪಡಲಾರ ಆದ್ದರಿಂದ ಅವನು ಸಮೂಹ, ಸಂಘ ಸಮಾಜವೆಂದು ಬೇರೊಬ್ಬರ ಜೊತೆ ಬದುಕಲು ಇಷ್ಟಪಡುತ್ತಾನೆ. ತನ್ನ ಗುಣಗಳೊಂದಿಗೆ, ಭಾವನೆಗಳೊಂದಿಗೆ ಹಾಗೂ ಅವನಂತೆ ಬಾಳುವ ವ್ಯಕ್ತಿಗಳನ್ನು ಒಂದು ಕಡೆ ಸೇರಿಸಿ ಅವರದೇ ಆದ ಒಂದು ಸಮೂಹವನ್ನು ಮಾಡಿಕೊಂಡು ಅವನು ಬದುಕಲು ಇಷ್ಟಪಡುತ್ತಾನೆ. ಆ ಗುಂಪಿನಿಂದ ಅವರ ಸಂಘದಿಂದ ತನ್ನ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಇಷ್ಟಪಡುತ್ತಾನೆ. ಈ ರೀತಿಯ ಗುಂಪುಗಳನ್ನು ಕಟ್ಟಿಕೊಂಡು ತನ್ನದೇ ಆದ ಸಮಾಜವನ್ನು ನಿರ್ಮಿಸಿಕೊಂಡು ಅವರಿಗೆ ಅನುಕೂಲವಾಗುವ ಕೆಲವೊಂದು ನೀತಿ–ನಿಯಮಗಳನ್ನು ರೂಪಿಸಿಕೊಂಡು ಅವನು ತನ್ನ ಮತ್ತು ತನಗೆ ಸಂಬಂಧಿಸದವರ ಜೀವನದ ಆಗು–ಹೋಗುಗಳ ಕಡೆ ತನ್ನ ಗಮನವನ್ನು ಕೇಂದ್ರೀಕರಿಸಿ ಜೀವನದ ಹಾದಿ ಸುಗಮಮಾಡಿಕೊಳ್ಳುತ್ತಾನೆ. ಬುದ್ಧಿಜೀವಿ ಮತ್ತು ಸಂಘಜೀವಿಯಾದ ಮನುಷ್ಯ ತನ್ನದೇ ಆದ ಸಾಮಾಜಿಕ ನೀತಿ–ನಿಯಮ ಹಾಗೂ ಲೋಕ ರೂಢಿಗಳನ್ನು ನಿರ್ಮಿಸಿಕೊಂಡು ಚಿಕ್ಕಗೂಡಿನಲ್ಲಿ ಜೀವನ ನಡೆಸಲು ಪ್ರಯತ್ನಿಸುತ್ತಾನೆ. ಈ ನಿಯಮಗಳಿಂದ ತನ್ನ ವ್ಯವಹಾರಕ್ಕೆ ಭದ್ರವಾದ ಬುನಾದಿಯನ್ನು ಹಾಕಿಕೊಂಡು ತನ್ನ ಸಂಗಡಿಗರ ಜೊತೆಗೆ ಸಮಾನತೆಯನ್ನು ಹಾಗೂ ಅವರ ಸಹ ಜೀವಿಗಳೊಡನೆ ಏಕತೆಯನ್ನು ಗುರುತಿಸುವ ಪ್ರಯತ್ನವನ್ನು ಮಾಡುತ್ತಾನೆ. ಸಮೂಹದಲ್ಲಿ ಅವನ ಸದಸ್ಯತ್ವವನ್ನು ಹಾಗೂ ಪಾತ್ರವನ್ನು ಅವನ ಕಾರ್ಯಕ್ಷಮತೆಯನ್ನು ಮನದಟ್ಟು ಮಾಡಿಕೊಡುವ ಪ್ರಯತ್ನ ಮಾಡುತ್ತಾನೆ. ಈ ನಿಯಮಗಳು ಸಹ ಮಾನವನ ವಿವೇಚನೆಯನ್ನು ಹೆಚ್ಚಿಸಿಕೊಳ್ಳುವಲ್ಲಿ ತುಂಬಾ ಪೂರಕವಾದ ಕಾರ್ಯವನ್ನು ನಿರ್ವಹಿಸುತ್ತವೆ. ಅದೇ ರೀತಿ ಜನರ ನಿತ್ಯದ ನಡತೆಯನ್ನು ನಿಯಂತ್ರಿಸುವ ನಿಯಮಗಳನ್ನು ಸಹಜವಾಗಿ ಲೋಕರೂಢಿ ಎನ್ನುತ್ತೇವೆ. ಇವು ಸರ್ವರೂ ಒಪ್ಪಿದ ನಡತೆಯ ರೀತಿ–ಪರಂಪರೆಗಳಾಗಿದ್ದು, ಜನರ ದೈನಂದಿನ ಆಚಾರ ಕ್ರಮವನ್ನು

ಶಿಳ್ಳೇಕ್ಯಾತರು ಸಹ ಒಂದು ಅಚ್ಚುಕಟ್ಟಾದ ಸಾಮಾಜಿಕ ಜೀವನವನ್ನು ರೂಪಿಸಿಕೊಂಡಿದ್ದಾರೆ. ಇವರು ಅಲೆಮಾರಿ ಜನಾಂಗವಾದರೂ ಸಹ ಅತ್ಯಂತ ಸುಂದರ ಮತ್ತು ಸೊಗಸಾದ ಜೀವನಶೈಲಿಯನ್ನು ರೂಢಿಸಿಕೊಂಡು ಅತ್ಯಂತ ನಿಯಮಬದ್ಧವಾದ ನಾಗರೀಕ ಜೀವನ ರೂಪಿಸಿಕೊಂಡು ಸಾಮಾಜಿಕ ಜೀವನವನ್ನು ನಡೆಸಿಕೊಂಡು ಬರುತ್ತಿದ್ದಾರೆ. ನಾವು ಈ ಒಂದು ಅಧ್ಯಯನದಲ್ಲಿ ಅವರ ಕುಟುಂಬ ಅವರು ನಡೆದುಕೊಂಡು ಬಂದ ರೀತಿ, ಸಾಮಾಜಿಕ ವ್ಯವಸ್ಥೆ, ಕುಲಪಂಚಾಯಿತಿ ಹಾಗೂ ಇವೆಲ್ಲದಕ್ಕಿಂತ ಮಿಗಿಲಾಗಿ ಅವರ ಸಂತೋಷದಾಯಕವಾದ ಸಾಮಾಜಿಕ ಬದುಕಿನ ರೀತಿಯನ್ನು ಈ ಒಂದು ಅಧ್ಯಾಯದಲ್ಲಿ ಹಿಡಿದಿಡುವ ಪ್ರಯತ್ನವನ್ನು ಮಾಡಲಾಗಿದೆ.

**ಕುಟುಂಬ:** ಭಾರತೀಯ ಸಂಸ್ಕೃತಿಯ ಒಂದು ಇತಿಹಾಸವನ್ನು ಇಣುಕಿ ನೋಡಿದಾಗ ಮನುಷ್ಯ ಸಂಘಜೀವಿ. ಅವನಿಗೆ ಏಕಾಂಗಿಯಾಗಿ ಬದುಕುವುದು ತುಂಬಾ ಕಷ್ಟಕರ ಹೀಗಾಗಿ ಅವನು ಸಂಘದ ಸಾಮೀಪ್ಯವನ್ನು ಹುಡುಕುತ್ತಾನೆ. ಹೀಗಿರುವುದರಿಂದ ಮನುಷ್ಯ ಹುಟ್ಟಿನಿಂದ ಸಾಯುವವರೆಗೂ ಒಂದಲ್ಲ ಒಂದು ರೀತಿ ಅವನು ಮತ್ತೊಬ್ಬರ ಜೊತೆಗೆ ಬಾಳುವುದನ್ನು ಇಷ್ಟಪಡುತ್ತಾನೆ. ಆ್ಯಡಮ್ ಮತ್ತು ಇವೆನ್‌ರ ಕಥೆಯನ್ನೇ ನೋಡಿದಾಗ ಅವರು ಒಬ್ಬರು ಇನ್ನೊಬ್ಬರ ಸಂಗಡವಿದ್ದು ಸಮಾಜದ ಸೃಷ್ಟಿಗೆ ಕಾರಣರಾದರು ಎನ್ನುವುದು ಒಂದು ದೃಷ್ಟಾಂತ. ಆದರೆ ಅಲೆಮಾರಿ ಜನಾಂಗದ ಒಂದು ಉಪಜಾತಿಯಾದ ಶಿಳ್ಳೇಕ್ಯಾತರು ಸಹ ಬೆಟ್ಟಗುಡ್ಡದ ಜೀವನಶೈಲಿ, ಅನಾಗರಿಕರ ಒಂದು ಹಾದಿಯನ್ನು ಹಿಡಿದು ಬಂದಿದ್ದರೂ ಸಹ ಇವರು ತಮ್ಮದೇ ಆದ ಒಂದು ಪದ್ಧತಿಯನ್ನು ಆಚರಿಸುತ್ತಾ ಬಂದಿದ್ದಾರೆ. ಇವರು ತಮ್ಮ ಸುಂದರವಾದ ಗುಡಿಸಲಿನಲ್ಲಿ ಅಪ್ಪ-ಅಮ್ಮ ಹಾಗೂ ಹೆಂಡತಿ ಮಕ್ಕಳ ಜೊತೆಗೆ ಇದ್ದಷ್ಟರಲ್ಲಿಯೇ ತುಂಬಾ ಸಂತೋಷದಾಯಕವಾದ ಜೀವನ ಶೈಲಿಯನ್ನು ರೂಢಿಸಿಕೊಂಡಿದ್ದಾರೆ. ಏಕಲವ್ಯ ನಗರದಲ್ಲಿನ ಜೀವನ ಪದ್ಧತಿಯನ್ನೇ ನಾವು ಇಲ್ಲಿ ಚಿತ್ರಿಸುವುದಾದರೆ ಒಂದು ಮನೆಯಲ್ಲಿ ನಾಲ್ಕರಿಂದ ಐದು ಜನವಾಸ ಮಾಡುತ್ತಾರೆ. ತಂದೆ-ತಾಯಿ ಹಾಗೂ ಮಕ್ಕಳೊಂದಿಗೆ ಇವರು ಜೀವನವನ್ನು ನಡೆಸುತ್ತಾರೆ. ವಯಸ್ಸಿಗೆ ಬಂದ ಮಕ್ಕಳು ಸಹ ಅವರೊಂದಿಗೆ ಜೀವನವನ್ನು ಮಾಡುವುದು ಇವರಿಗೆ ಅನಿವಾರ್ಯವಾಗಿದೆ. ಕಾರಣ ಇವರು ಒಂದೇ ಗುಡಿಸಲಿನಲ್ಲಿಯೇ ಒಂದೊಂದು ಮೂಲೆಯೂ ಒಬ್ಬೊಬ್ಬರದು ಎನ್ನುವಂತೆ ಇವರು ಬಾಳ್ವೆಯನ್ನು ಮಾಡುತ್ತಾರೆ. ವಯಸ್ಸಿಗೆ ಬಂದಂತಹ ಗಂಡುಮಕ್ಕಳು ಗುಡಿಸಲಿನ ಹೊರವಲಯದಲ್ಲಿ ಅಥವಾ ಅಂಗಳದಲ್ಲಿ ಮಳೆಗಾಲವನ್ನು ಹೊರತುಪಡಿಸಿ ಹೊರಗಡೆ ಮಲಗುವ ಪದ್ಧತಿ ಇದೆ. ಆದರೆ ವರ್ಷದ ಹಲವಾರು ದಿನಗಳು ಇವರು ಊರೂರು

ತಿರುಗಾಡುವುದರಿಂದ ಮದುವೆಯಾದಂತಹ ಮಕ್ಕಳು ತಮ್ಮ ಹೆಂಡತಿಯನ್ನು ಕರೆದುಕೊಂಡು ತಮ್ಮ ಆಟ-ನಾಟಕ ಹಾಗೂ ಇನ್ನೀತರ ತಮ್ಮ ಜೀವನೋಪಾಯಕ್ಕೆ ಹಾಕಿಕೊಂಡ ಮಾರ್ಗವನ್ನು ಹಿಡಿದು ಅವರು ಹೊಟ್ಟೆಪಾಡಿಗಾಗಿ ಊರಿಂದೂರಿಗೆ ಹೋಗುತ್ತಿರುತ್ತಾರೆ.

**ಮದುವೆ/ವಿವಾಹ ಪದ್ಧತಿ:**

ಬೇರೆ ಜನಾಂಗದಲ್ಲಿರುವಂತೆ ಈ ಜನಾಂಗದಲ್ಲಿಯೂ ತಮ್ಮ ಜನಾಂಗದ ಮುಂದುವರಿಕೆಗಾಗಿ ಮದುವೆ-ಮುಂಜಿ ಎನ್ನುವ ಸಂಪ್ರದಾಯವಿದ್ದು ಅದನ್ನು ಅತ್ಯಂತ ಅಚ್ಚುಕಟ್ಟಾಗಿ ಪರಿಪಾಲಿಸಿಕೊಂಡು ಬಂದಿದ್ದಾರೆ. ಇಲ್ಲಿ ವಯಸ್ಸಿಗೆ ಬಂದ ಒಂದು ಗಂಡು ಮತ್ತು ಹೆಣ್ಣನ್ನು ವಯಸ್ಸಿಗೆ ಬಂದಾಗ ಅವರ ಇಬ್ಬರ ಕಡೆಯ ಹಿರಿಯರು ಒಪ್ಪಿಕೊಂಡ ನಂತರ ಹುಡುಗ ಮತ್ತು ಹುಡುಗಿಯ ಒಪ್ಪಿಗೆಯ ಮೇರೆಗೆ ಮದುವೆಯಾಗುತ್ತದೆ. ಆದರೆ ಕೆಲವೊಮ್ಮೆ ಇನ್ನೂ ಇಲ್ಲಿ ಚಿಕ್ಕ ಮಕ್ಕಳಿರುವಾಗಲೇ ಹುಡುಗ ಮತ್ತು ಹುಡಗಿಯ ತಂದೆ-ತಾಯಿಂದಿರು ತಮ್ಮ ಸಾಮಾಜಿಕ ನಂಟು ಚೆನ್ನಾಗಿರುವುದಕ್ಕಾಗಿ ಹಾಗೂ ಅವರು ಸ್ನೇಹದ ನೆನಪಿಗಾಗಿ ಚಿಕ್ಕಂದಿನಲ್ಲಿಯೇ ಮದುವೆ ಮಾಡುವ ಸಂಪ್ರದಾಯ ಇಂದಿಗೂ ಸ್ವಲ್ಪಮಟ್ಟಿಗೆ ಇರುವುದನ್ನು ಕಾಣುತ್ತೇವೆ. ಆದರೆ ಇವರು 'ಮದುವೆ' ಎನ್ನುವ ವಿಚಾರದಲ್ಲಿ ತುಂಬಾ ಕಟ್ಟುನಿಟ್ಟಾದ ರೂಢಿ ಪದ್ಧತಿಯನ್ನು ಇವತ್ತಿಗೂ ಅಚ್ಚುಕಟ್ಟಾಗಿ ಪಾಲಿಸುತ್ತಾ ಬಂದಿದ್ದಾರೆ. ಈ ಜನಾಂಗದಲ್ಲಿ ಒಂದು ಮದುವೆ ಆಗಬೇಕಾದರೆ ಅಕ್ಕ ಮತ್ತು ಮಾವ/ ಅತ್ತೆಯ ಮಕ್ಕಳನ್ನು ಮದುವೆ ಮಾಡುತ್ತಾರೆ. ಈ ಒಳಸಂಬಂಧವನ್ನು ಬಿಟ್ಟು ಹೊರಗಡೆ ಹೆಣ್ಣು/ಗಂಡು ಹುಡುಕಬೇಕಾದರೆ ತುಂಬಾ ನಿಯಮಗಳನ್ನು ಪಾಲಿಸುತ್ತಾರೆ. ಅದರಲ್ಲಿಯೂ ಈ ಜನಾಂಗದಲ್ಲಿ ಹದಿನೆಂಟು ರೀತಿಯ ಬೆಡಗುಗಳಿವೆ. ಆ ಬೆಡಗುಗಳಲ್ಲಿ ವ್ಯಕ್ತಿ, ವೃತ್ತಿ ಮತ್ತು ಪ್ರಕೃತಿ ಮೂಲವನ್ನು ಹೊಂದಿವೆ. ಉದಾಹರಣೆಗೆ ಅಟಕ (ಗಣಾಚಾರಿ) ಪಾಚಂಗೆ (ಭಂಡಾರಿ) ಮೋರ್‍ಯಾ, ಸಾಳ್ವೆ, ದುಮಾಳ, ಸರ್ವದೆ, ಗರೋಡ್, ಕಾಕಡೆ, ವಾನರ್ಚ, ನೇಕನಾರ್, ಸಾಸನೀಕ್, ಶಿಂಧ್ಯಾ, ದುರ್ವೆ, ದೊರ್‌ಕರ್, ಸಿನಗಾನ್, ಐಮೇಟ್, ಬಾಗಡೆ ಮತ್ತು ರುಸನಕುಂಟೆ ಹೀಗೆ ಈ ಬೆಡಗುಗಳನ್ನು ಧರಿಸಿ ಮದುವೆ ಕಾರ್ಯಕ್ರಮ ನಡೆಯುತ್ತವೆ. ಒಂದೇ ಬೆಡಗಿನವರಲ್ಲಿ ಮದುವೆಗಳು ನಡೆಯುವುದಿಲ್ಲ ಕಾರಣ ಅವರು ಸಹೋದರ ಸಂಬಂಧಿಗಳಾಗುತ್ತಾರೆ. ಒಂದು ವೇಳೆ ಮದುವೆ ಮಾಡುವಂತಹ ಅನಿವಾರ್ಯ ಸಂದರ್ಭ ಬಂದರೆ ಇವರು ಹುಡುಗ ಅಥವಾ ಹುಡುಗಿಯನ್ನು ಬೇರೆಯವರ ಉಡಿಯಲ್ಲಿ ಹಾಕಿ ಅವರನ್ನು ಮದುವೆ ಮಾಡಿಸುವಂತ ರೂಢಿ ಇವರಲ್ಲಿದೆ.

ಮದುವೆಯಲ್ಲಿ ಹಲವಾರು ರೀತಿಯ ಶಾಸ್ತ್ರಗಳು ಇವರಲ್ಲಿ ರೂಢಿಯಲ್ಲಿದ್ದು ಒಂದು ಗಂಡು ಮತ್ತು ಹೆಣ್ಣು ಜೀವನಪರ್ಯಂತ ಚೆನ್ನಾಗಿರಲೆಂದು ಮದುವೆಯ ಹಿಂದಿನ ದಿನದಲ್ಲಿ ಕರಿಲಕ್ಷ್ಮಿಯೆಂದು ಮನೆಯೊಳಗಡೆ ಮುತ್ತೈದೆಯರನ್ನು ಕರೆಯಿಸಿ ಅವರಿಗೆ ಹೂವು, ಹಸಿರುಬಳೆ ಕೊಟ್ಟು ಉಡಿ ತುಂಬಾ ಐದು ರೀತಿಯ ಧಾನ್ಯವನ್ನು ಕೊಟ್ಟು ಅವರಿಂದಲೇ ಅಡುಗೆ ಮಾಡಿಸಿ ಅವರಿಗೆ ಊಟ ಬಡಿಸುತ್ತಾರೆ. ಉಳಿದಂತಹ ಆಹಾರವನ್ನು ಅದೇ ನಡುಮನೆಯಲ್ಲಿ ಹೂಳಿ ಇಡೀ ರಾತ್ರಿ ದೇವರ ಭಜನೆ ಮಾಡುತ್ತಾರೆ. ಹೀಗೆ ಮಾಡುವುದರಿಂದ ಹೆಣ್ಣು ಸದಾ ಸುಮಂಗಲಿಯಾಗಿರುವಳೆಂಬ ನಂಬಿಕೆ ಬಲವಾಗಿ ಇವರಲ್ಲಿದೆ. ನಂತರ ಮದುವೆ ದಿನ ದೇವರ ಎದುರು ಎಲ್ಲರ ಸಮಕ್ಷಮ ಮದುವೆ ನಡೆದು ಅಂದಿನ ರಾತ್ರಿ ಹುಡುಗ ಮತ್ತು ಹುಡುಗಿಯನ್ನು ಬೇರೆ ಬೇರೆ ಇಟ್ಟು ಐದು ದಿನ ಮನೆಯ ದೇವರ ಹಾಗೂ ಇನ್ನಿತರ ಪೂಜಾ ಪುನಸ್ಕಾರದ ನಂತರ ಗಂಡು-ಹೆಣ್ಣನ್ನು ಒಂದಾಗಲು ಬಿಡುತ್ತಾರೆ. ಹೀಗೆ ಅವರು ತಮ್ಮದೇ ಆದ ನೀತಿ-ನಿಯಮ, ರೂಢಿ-ಪದ್ಧತಿಗಳನ್ನು ಬಿಟ್ಟು ಮದುವೆ ಮಾಡುವುದಿಲ್ಲ. ಇನ್ನೂ ಯಾವುದೇ ಮದುವೆ ನಡೆಯಬೇಕಾದರೆ ಗುರು-ಹಿರಿಯರ ಒಪ್ಪಿಗೆ ಹಾಗೂ ಬೆಡಗು-ಜಾತಕ ಇವುಗಳನ್ನೆಲ್ಲಾ ತುಂಬಾ ಅಚ್ಚುಕಟ್ಟಾಗಿ ಪಾಲಿಸುತ್ತಾರೆ.

ಶಿಳ್ಳೆಕ್ಯಾತರಲ್ಲಿ ಮದುವೆ ಮಾಡಬೇಕಾದರೆ ಹುಡುಗನು ಸುಂದರವಾಗಿ ಇರುವುದಕ್ಕಿಂತಲೂ ಅವನು ಕಲೆಯನ್ನು ಬಲ್ಲವನಾಗಿರಬೇಕು. ಶಿಕ್ಷಣ ಇಲ್ಲದಿದ್ದರು ಅವನು ವೃತ್ತಿಗತವಾಗಿ ಬಂದಂತಹ ಕಲೆಯನ್ನು ಹೊಂದಿದ್ದರೆ ಸಾಕು, ಹೆಣ್ಣು ಸಹ ಅಷ್ಟೆ ಧ್ವನಿ ಚೆನ್ನಾಗಿರಬೇಕು ಹಾಡಲು ಬಂದರೆ ತುಂಬಾ ಉತ್ತಮ. ಒಟ್ಟಾರೆ ಮದುವೆಯಾದ ಮೇಲೆ ಅವರು ತಮ್ಮ ಜೀವನವನ್ನು ನಡೆಯಿಸಿಕೊಂಡು ಹೋಗುವ ಭರವಸೆ ಅವರಿಗೆ ಬಂದರೆ ಮದುವೆ ಸರಾಗವಾಗಿ ನಡೆಯುತ್ತದೆ. ಇವರಲ್ಲಿ ಯಾವುದೇ ರೀತಿಯ ಆಸ್ತಿ-ಅಂತಸ್ತಿನ ಬಗ್ಗೆ ತಲೆಕಡೆಸಿಕೊಳ್ಳುವುದಿಲ್ಲ. ಅವರ ವೃತ್ತಿ ನಿಪುಣತೆಯೇ ಅವರ ಆಸ್ತಿ-ಅಂತಸ್ತು.

ಶಿಳ್ಳೇಕ್ಯಾತರಲ್ಲಿ ಮದುವೆಯಾದರೆ ಸರ್ವೇಸಾಮಾನ್ಯವಾಗಿ ಒಂದು ಬೇರೆ ಕೊಂಪೆ ಅಥವಾ ಗುಡಿಸಲು ಹಾಕಿಕೊಂಡು ಹೊಸ ಜೀವನವನ್ನು ನಡೆಸುತ್ತಾರೆ. ಆದರೆ ಊಟ-ಉಪಚಾರವೆಲ್ಲ ತಂದೆ-ತಾಯಿ ಕುಟುಂಬದವರೊಡಗೂಡಿ ನಡೆಯುತ್ತದೆ. ಇನ್ನೊಂದು ಇವರ ಮದುವೆಯ ವಿಶೇಷತೆಯೆಂದರೆ ಕನ್ಯೆ ನಿಶ್ಚಯದಿಂದ ಹಿಡಿದು ಹಸೆಮಣೆ ಏರಿ ಗಂಡು-ಹೆಣ್ಣನ್ನು ಒಂದಾಗುವವರೆಗೂ ಹಲವಾರು ಶಾಸ್ತ್ರಗಳು ನಡೆಯುತ್ತವೆ. ಅವರ ಮದುವೆ ಒಂದು ಹಬ್ಬದ ವಾತಾವರಣವನ್ನು ನಿರ್ಮಿಸುತ್ತದೆ.

ಕೆಲವೇ ಕೆಲವು ಜನರಿರುವ ಈ ಜನಸಮೂಹ ಮದುವೆಯಲ್ಲಿ ಎಲ್ಲಿದ್ದರು ಅವರೆಲ್ಲ ಬಂದು, ವೀಳ್ಯೆಶಾಸ್ತ್ರ, ದೇವತಾಕಾರ್ಯ, ಹಂದರದಿನ, ಹಂದರವೀಳ್ಯ, ಅರಿಶಿಣ ಕಾರ್ಯ, ಎಣ್ಣೆ ಬೀರುವುದು, ಬಳಗದ ಸುರಗಿ, ಮಾಂಗಲ್ಯಧಾರಣೆ, ವಧುವರರ ಅಡಗಿ–ಆಟ, ಉಂಗುರದಾಟ, ಪತಿ–ಸತಿಯನ್ನು ಹುಡುಕುವುದು, ಓಕುಳಿ, ನೀರಾಡುವ ಕಾರ್ಯಕ್ರಮ ಹೀಗೆ ಹತ್ತು ಹಲವಾರು ಕಾರ್ಯಕ್ರಮಗಳು ಇಡೀ ಜನಾಂಗದ ಹಿರಿಯ ಕಿರಿಯರೆಲ್ಲರೂ ಕೂಡಿಕೊಂಡು ಅತ್ಯಂತ ಸಡಗರ–ಸಂಭ್ರಮದಿಂದ ಪ್ರತಿ–ಯೊಂದರಲ್ಲಿಯೂ ಭಾಗಿಯಾಗಿ ವಿಜೃಂಭಣೆಯಿಂದ ಆಚರಿಸುತ್ತಾರೆ.

ಮದುವೆಗೆ ಸಂಬಂಧಿಸಿದಂತೆ ಕೆಲವು ನಂಬಿಕೆಗಳು ಈ ಜನರಲ್ಲಿದ್ದು ಅವುಗಳನ್ನು ಇವರು ಅತ್ಯಂತ ಜಾಗೃತೆಯಿಂದ ನಿರ್ವಹಿಸುತ್ತಾರೆ. ಉದಾಹರಣೆಗೆ ಎಣ್ಣೆ ಹಚ್ಚುವುದು, ನೀರೆರೆಯುವುದು, ಮದುವೆಗೆ ಮುಂಚೆ ಕರಿಲಕ್ಷ್ಮೀ ಪೂಜೆ ಮಾಡುವುದು, ಹಂದರ ಇಳಿಸುವುದು, ಮದುವೆ ಆದ ಮೇಲೆ ಒಂದು ವರ್ಷದವರಿಗೆ ಕಸಬಾರಿಗೆ ಕೊಂಡುಕೊಳ್ಳದೆಯಿರುವುದು, ಕಲಗಲ ಪೂಜೆ ಮಾಡಿಸುವುದು ಕಾರಹುಣ್ಣಿಮೆಯ ದಿನ ಕರಿಹರಿಯುವುದನ್ನು ನೋಡಬಾರದು, ಮದುವೆಯಾದ ಮೊದಲ ವರ್ಷದಲ್ಲಿ ಹೊಸ ಮೂಗುತಿ ಹಾಕದಿರುವುದು ಇವುಗಳನ್ನೆಲ್ಲಾ ಇವರು ಚಾಚುತಪ್ಪದೇ ತಮ್ಮ ಕಾರ್ಯದಲ್ಲಿ ಮದುವೆಗೆ ಮುಂಚಿನ ಮತ್ತು ನಂತರದ ಪದ್ಧತಿಗಳನ್ನು ನೆರವೇರಿಸಿಕೊಂಡು ಬರುತ್ತಾರೆ.

**ರೂಢಿ ಮತ್ತು ಪದ್ಧತಿಗಳು**

ರೂಢಿ ಮತ್ತು ಪದ್ಧತಿಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಇವು ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಹರಿದು ಹೋಗುವಂತಹವು. ಇವುಗಳು ಸಮೂಹ ಮತ್ತು ಸಮಾಜದಲ್ಲಿ ಅರಿವಿಲ್ಲದೆಯೇ ಬೆಳೆದು ಬರುವ ದೈನಂದಿನ ನಡವಳಿಕೆಗಳಾಗಿವೆ. ಈ ರೂಢಿ ಮತ್ತು ಪದ್ಧತಿಗಳು ವೈವಿಧ್ಯಪೂರ್ಣವಾಗಿದ್ದು ಪ್ರತಿಯೊಂದು ಸಮಾಜವು ತನ್ನದೇ ಆದ ರೀತಿಯ ಲೋಕಚಾರಗಳನ್ನು ಹೊಂದಿರುತ್ತವೆ. ಒಂದು ಜನಾಂಗ ಒಂದು ರೀತಿಯಾಗಿ ಪಾಲಿಸಿದರೆ ಇನ್ನೊಂದು ಜನಾಂಗ ಮತ್ತೊಂದು ರೀತಿಯಾಗಿ ರೂಢಿಸಿಕೊಂಡು ಬರುತ್ತವೆ. ಇಲ್ಲಿ ಅಲೆಮಾರಿಗಳಾದ ಶಿಳ್ಳೇಕ್ಯಾತರು ಸಹ ತಮ್ಮದೇ ಆದ ಹಿರಿಯರಿಂದ ಬಂದಂತಹ ರೂಢಿಪದ್ಧತಿಗಳನ್ನು ಇಂದಿಗೂ ಚಾಚು ತಪ್ಪದೆ ರೂಢಿಸಿಕೊಂಡು ಬಂದಿದ್ದಾರೆ.

ಅವುಗಳು ಈ ಕೆಳಗಡೆ ಒಂದೊಂದಾಗಿ ನೋಡುವುದಾದರೆ;

**ಹುಟ್ಟು/ಜನನ:** ಶಿಳ್ಳೇಕ್ಯಾತರು ಒಂದು ಮಗುವಿನ ಜನನಕ್ಕೆ ಸಂಬಂಧಿಸಿದಂತೆ ಈ ನಂಬಿಕೆಗಳನ್ನಿಟ್ಟುಕೊಂಡಿದ್ದಾರೆ. ಸಾವಿರ ಜನ್ಮದ ಪುಣ್ಯವಿರಬೇಕು ಎಂದಾಗ ಮಾತ್ರ ಮಕ್ಕಳಾಗುತ್ತವೆ ಇಲ್ಲದಿದ್ದರೆ ಮಕ್ಕಳಾಗುವುದಿಲ್ಲ ಎಂಬ ಕಲ್ಪನೆಯನ್ನು ಮೈಗೂಡಿಸಿಕೊಂಡು ಬಂದಿದ್ದಾರೆ. ಆದ್ದರಿಂದ ಇವರು ಮಗುವಿನ ಜನನವನ್ನು ದೇವರ ಅನುಗ್ರಹವೆಂದು ಪಾಲಿಸುತ್ತಾರೆ. ಹೊಸದಾಗಿ ಮದುವೆಯಾದ ಒಂದು ಗಂಡು ಮತ್ತು ಹೆಣ್ಣಿನ ಸಹ ಮನಸ್ಸಿನ ಸಹಯೋಗದಿಂದ ಆಗುವ ಗರ್ಭದಿಂದ ಸಾಕಷ್ಟು ರೀತಿಯ ಪದ್ಧತಿಗಳನ್ನು ಈ ಜನಾಂಗ ಪಾಲಿಸುತ್ತಾ ಬಂದಿವೆ. ಮದುವೆಯಾದ ಒಂದು ವರ್ಷದಲ್ಲಿ ಮಕ್ಕಳಾಗದಿದ್ದರೆ ಹಲವಾರು ದೇವತೆಗಳನ್ನು ಹರಕೆಹೊತ್ತು ಮಕ್ಕಳನ್ನು ಪಡೆಯುವ ಕಾರ್ಯದಲ್ಲಿ ತೊಡಗುತ್ತಾರೆ. ಇಲ್ಲದಿದ್ದರೆ ಜನಾಂಗದಲ್ಲಿ ಗೌರವವಿರುವುದಿಲ್ಲ ಅತ್ತೆ-ಮಾವಂದಿರ ಹಾಗೂ ಗಂಡನ ಪ್ರೀತಿಯಿಂದ ದೂರವಿರಬೇಕೆಂಬ ಕೊರಗು ಹಾಗೂ ಬಂಜೆ ಎಂಬ ಪದಕ್ಕೆ ಪಾತ್ರಳಾಗಬೇಕೆಂಬ ಕೊರಗು ಹೀಗಾಗಿ ಈ ಸಮಾಜದಲ್ಲಿ ಮದುವೆಯಾದ ವರ್ಷದಲ್ಲಿ ಹೆಣ್ಣು ಗರ್ಭವತಿಯಾದರೆ ಆ ಮನೆಯಲ್ಲಿ ಸಂಭ್ರಮವೋ ಸಂಭ್ರಮ. ಗಂಡಿನ ಕಡೆಯವರು ಹಾಗೂ ಸೋದರ ಮಾವನಿಗೆ ಸೆರೆ-ಸಿಂಧಿಯನ್ನು ಕೊಟ್ಟು ಪ್ರೀತಿ-ಗೌರವಗಳ ಕೊಡ-ಕೊಡುಗೆಗಳು ನಡೆಯುತ್ತಿರುತ್ತವೆ. ಹೆಣ್ಣಿನ ಕಡೆಯವರು ಹತ್ತು ಹಲವು ರೀತಿಯ ತಿಂಡಿ ಪದಾರ್ಥಗಳು ಮಾಡಿ ಹಂಚುತ್ತಾರೆ.

ಗರ್ಭಧರಿಸಿದ ಸಂದರ್ಭದಲ್ಲಿ ಈ ಜನಾಂಗದವರು ಪ್ರಮುಖವಾಗಿ ಹೆಣ್ಣಿನ ಕಡೆಯವರು 'ಬುತ್ತಿ ತರುವುದು' ಕಳ್ಳಕುಬಸ ಮಾಡುವುದು, ಹಚ್ಚುಹಾಕುವ ಹಾಗೂ ಕರಕುಶಲ ಕಲೆಗಳಲ್ಲಿ ತೊಡಗಿಸುವುದು, 'ಸೀಮಂತ' ಮಾಡುವುದು ಪ್ರಮುಖವಾದ ನಂಬಿಕೆಗಳು. ಇಲ್ಲಿ ಎಲ್ಲದಕ್ಕಿಂತ ಮಿಗಿಲಾಗಿ ಗರ್ಭಧರಿಸಿದ ಹೆಣ್ಣನ್ನು ಐದು ತಿಂಗಳಗಳವರಿಗೂ ಎಲ್ಲಿಗೂ ಕಳುಹಿಸುವುದಿಲ್ಲ. ಇಂತಹ ಸಂದರ್ಭದಲ್ಲಿ ಗಂಡಸರು ಊರೂರು ಆಟವಾಡಲು/ಗೊಂಬೆ ಆಡಿಸಲು ಹೋದರೂ ಮನೆಯಲ್ಲಿನ ತಂಗಿಯರನ್ನು ಅಥವಾ ತಮ್ಮ ಅಥವಾ ತಾಯಿಯನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಾರೆ. ಇಲ್ಲಿ ಗರ್ಭಧರಿಸಿದ ಹೆಂಗಸು ಹಳ್ಳಕೊಳ್ಳ ದಾಟಿದರೆ ಮುಟ್ಟಾಗುವ ಸಂದರ್ಭ ಬರುತ್ತದೆ ಎಂಬ ಮೂಢ ನಂಬಿಕೆಯಿಂದ ಹೆಣ್ಣನ್ನು ಒಂದೇ ಮನೆಯಲ್ಲಿಯೇ ಇಡುತ್ತಾರೆ. ಇದರೊಂದಿಗೆ ಅವಳನ್ನು ಹಚ್ಚು ಹಾಕುವ ಮತ್ತು ಕೌದಿ ಹೊಲೆಯುವ ಕೆಲಸ ಅಥವಾ ಇನ್ನಿತರ ಮನೆಕೆಲಸದಲ್ಲೂ ತೊಡಗಿಸುವುದು ರೂಢಿ. ಕಾರಣ, ಹೆರಿಗೆ ಚೆನ್ನಾಗಿ ಆಗುತ್ತದೆ (ಸುಲಭವಾಗಿ) ಹಾಗೆ ಮುಂದೆ ಹುಟ್ಟುವ ಮಕ್ಕಳು ಚೆನ್ನಾಗಿರುತ್ತವೆ ಎಂಬ

ನಂಬಿಕೆ. ಇನ್ನೂ ತಾಯಿ ಕಡೆಯವರು ಮಗಳಿಗೆ ಬೇಕಾದ ತಿಂಡಿ–ತಿನಿಸುಗಳನ್ನು ಕೊಟ್ಟು ತಾವು ತಂದಂತಹ ಬುತ್ತಿಯನ್ನು ತಮ್ಮ ಜನಾಂಗದ ಜನರಿಗೆ ಹಂಚುತ್ತಾರೆ. ಕಾರಣ ಎಲ್ಲರ ಹರಕೆ/ಆಶೀರ್ವಾದ ಆ ತಾಯಿ ಮತ್ತು ಮಗುವಿನ ಮೇಲೆ ಇರಲಿ ಎಂಬ ನಂಬಿಕೆಯಿಂದ ಹಾಗೂ ಅನ್ನ ಹಾಕಿದರೆ ಪುಣ್ಯವೆಂಬ ಭಾವನೆ ಅವರಲ್ಲಿ ಹರಡಿಕೊಂಡು ಬಂದಿದೆ. ಇನ್ನೂ ಎಲ್ಲರಂತೆ ಅವರು ಸಹ ಏಳು ತಿಂಗಳ ನಂತರ ಗರ್ಭಿಣಿಯನ್ನು ತಾಯಿ ಮನೆಗೆ ಕರೆದುಕೊಂಡು ಹೋಗಿ ಮೊದಲ ಹೆರಿಗೆ ತವರುಮನೆಯಲ್ಲಿ ನಡೆಯುವಂತೆ ಸಿದ್ಧತೆ ನಡೆಸುತ್ತಾರೆ. ಹೆಚ್ಚಿನ ಹೆರಿಗೆಗಳು ಮನೆಯಲ್ಲಿಯೇ ಆಗುತ್ತವೆ. ಕಾರಣ ಅವರಲ್ಲಿಯೇ ನುರಿತ ಮತ್ತು ಅನುಭವಿ ಸೂಲಗಿತ್ತಿಯರು ಇರುವುದರಿಂದ ಅವರೇ ಹೆರಿಗೆ ಮಾಡಿಸುತ್ತಾರೆ. ಅವರ ಜೊತೆಗೆ ಇನ್ನೂ ಅಕ್ಕಪಕ್ಕದ ಹೆಣ್ಣುಮಕ್ಕಳು ಹೆರಿಗೆ ಸುಸೂತ್ರವಾಗಲು ಸಹಾಯ ಮಾಡುತ್ತಾರೆ. ಹೆರಿಗೆ ನೋವು ಕಾಣಿಸಿದಾಗ ಶ್ಯಾವಿಗೆ ನೀರು ಕುಡಿಸುವುದರಿಂದ ಹೊಕ್ಕಳಿಗೆ ಎಣ್ಣೆ ಬಿಡುವುದರಿಂದ ಹೆರಿಗೆ ಸುಲಭವಾಗುತ್ತದೆ ಎನ್ನುತ್ತಾರೆ.

ಮಗುವಿನ ಜನನವಾದ ತಕ್ಷಣ ಮಗುವಿನ ಹೊಕ್ಕಳ ಬಳ್ಳಿಯನ್ನು ಕತ್ತರಿಸುವುದು ಹಾಗೂ ಅದರ ಕಿವಿಮೂಗನ್ನು ಊದುವರು ಕಾರಣ ಸರಿಯಾಗಿ ಉಸಿರಾಟ ಆಡಲಿ ಎಂಬುದು ಇವರ ವಿಚಾರ. ರಕ್ತಮಲದಿಂದ ಕೂಡಿದ ಮಗುವನ್ನು ಅರೆ ಬೆಚ್ಚಗಿನ ನೀರಿನಿಂದ ಮಗು ಮತ್ತು ತಾಯಿಗೆ ಸ್ನಾನ ಮಾಡಿಸಿ, ಮಗುವನ್ನು ಮೊರದಲ್ಲಿ ಹಾಕುವರು. ಕಾರಣ ಮೊರವನ್ನು ಭೂದೇವಿಯ ಮಡಿಲಿನ ಸಂಕೇತ ಎನ್ನುತ್ತಾರೆ. ನಂತರ ಮಗುವಿನ ಹೊಟ್ಟೆಗೆ ಬರೆ ಹಾಕುತ್ತಾರೆ ಕಾರಣ ಸಂದಿವಾತ ಕಾಯಿಲೆ ಬರುವುದಿಲ್ಲ ಎನ್ನುವ ನಂಬಿಕೆ ಅವರಲ್ಲಿದೆ. ಇನ್ನು ರಕ್ತ ಮತ್ತು ಮಾಸನ್ನು ನಡು ಮನೆಯಲ್ಲಿ ಹೂಳಿಬಿಡುತ್ತಾರೆ.

ಮಗುವಿನ ಜನನದ ಐದನೇ ದಿನದಂದು ತಾಯಿ ಮಗುವಿಗೆ ಸ್ನಾನ ಮಾಡಿಸಿ ಸೆಟಗವ್ವನ ಪೂಜೆ ಮಾಡಿಸಿ ದವಸಧಾನ್ಯಗಳನ್ನಿಟ್ಟು ನೈವೇದ್ಯ ಮಾಡುವರು ಹಾಗೂ ಒಣಕಿ ಮತ್ತು ಒಳ್ಳನ್ನು ಒಂದು ಕಡೆಯಿಟ್ಟು ಅವುಗಳಿಗೆ ಶೃಂಗಾರ ಮಾಡಿ ಮೊದಲು ದೇವರ ಪೂಜೆ ಮಾಡಿ ಐದು ಜನ ಮುತ್ತೈದೆಯರಿಗೆ ಊಟ ಮಾಡಿಸಿ ಕಳುಹಿಸುವರು. ಅಂದಿನಿಂದ ಮಗುವಿನ ಮೈಮೇಲೆ ಬಟ್ಟೆ ಹಾಕುವುದನ್ನ ಪ್ರಾರಂಭಿಸುವರು. ಸೆಟಗವ್ವನ ಪೂಜೆಯ ರಾತ್ರಿ ಮಗುವಿನ ಹಣೆಬರಹ ನಿರ್ಧಾರವಾಗುವುದು ಎಂಬ ನಂಬಿಕೆ ಅವರಲ್ಲಿರುವುದರಿಂದ ಸೆಟಗವ್ವನ ಪೂಜೆಯನ್ನು ಅತ್ಯಂತ ಅಚ್ಚುಕಟ್ಟಾಗಿ ನೆರವೇರಿಸುವರು. ಹಾಗೇ ನಾಮಕರಣವು ಸಹ ಅತ್ಯಂತ ಜೋರಾಗಿ ಮಾಡುವುದು

ಈ ಜನಾಂಗದ ಪದ್ಧತಿ. ನಾಮಕರಣದ ಸಂದರ್ಭದಲ್ಲಿ ಹೊಸತೊಟ್ಟಿಲು ಅಥವಾ ಜೋಳಿಗೆಯನ್ನು ಕಟ್ಟಿ, ತೊಟ್ಟಿಲು ಪೂಜೆ ಮಾಡಿ ಆ ದಿನ ವಿಶೇಷವಾಗಿ ತಾಯಿ ದೇವರಿಗೆ ನೈವೇದ್ಯ ಹಿಡಿದು ಮಗುವಿನ ಭವಿಷ್ಯದ ಬಗ್ಗೆ ಬೇಡಿಕೊಳ್ಳುತ್ತಾಳೆ. ಅಂದುರಾತ್ರಿ ಸೋದರಮಾವ ಸೋದರತ್ತೆಯರ ಎದುರುಗಡೆ ಮಗುವಿನ ನಾಮಕರಣ ನಡೆಯುತ್ತದೆ. ಅಲ್ಲಿ ಸೋದರತ್ತೆ ಮಗುವಿಗೆ ನಾಮಕರಣ ಮಾಡುವಳು, ಗುಗ್ಗರಿ ಗಂಟನ್ನು ತಲೆ ಮತ್ತು ಕಾಲು ಕಡೆಯಿಟ್ಟು ಅದನ್ನು ಬಾಯಿಯಲ್ಲಿ ಹಿಡಿದುಕೊಂಡು ತಲಬಾಗಿಲವರೆಗೆ ಹೋಗಿ ಬರುವ ರೂಢಿಯಿದೆ. ನಂತರ ಯಾವುದೋ ಒಂದು ಹೆಸರನ್ನು ಇಟ್ಟು ಕುರ್ರ್, ಕುರ್, ಎಂದು ಮೂರು ಬಾರಿ ಕೂಗುತ್ತಾರೆ. ಹೀಗೆ ಮಗುವಿನ ಜನನದಿಂದ ನಾಮಕರಣದವರೆಗೂ ತುಂಬಾ ಸಂಭ್ರಮದಿಂದ ರೂಢಿಗತವಾಗಿ ಬಂದಂತಹ ನಿಯಮಗಳನ್ನು ಪಾಲನೆ ಮಾಡುತ್ತಾರೆ.

**ಮರಣ:** ಈ ಪ್ರಪಂಚದಲ್ಲಿ ಜನಿಸಿದಂತಹ ಪ್ರತಿಯೊಂದು ಪ್ರಾಣಿಯೂ ಸಾವನ್ನಪ್ಪಲೇಬೇಕು. ಪ್ರತಿಯೊಂದು ಜೀವಜಂತುವಿಗೂ ಸಾವು ಎನ್ನುವುದು ಖಚಿತ ಹೀಗಿರುವಾಗ ಮನುಷ್ಯನು ಇದಕ್ಕೆ ಹೊರತಾಗಿಲ್ಲ. ಹೀಗಿರುವುದರಿಂದ ಮನುಷ್ಯ ಎಂಬ ಜೀವ ಈ ಪ್ರಪಂಚಕ್ಕೆ ಬಂದಮೇಲೆ ಎರಡು ಅವರ ಜೊತೆಗೆ ಬರುತ್ತವೆ. ಒಂದು ಕೆಟ್ಟದ್ದು ಇನ್ನೊಂದು ಒಳ್ಳೆಯದ್ದು, ಇಲ್ಲಿ ಯಾವ ಶ್ರೀಮಂತಿಕೆ– ಬಡತನ, ಮೇಲು–ಕೀಳು, ನಾನು–ನೀನು ಎಂಬುದು ಯಾವುದು ನಮ್ಮ ಜೊತೆಗೆ ಇರುವುದಿಲ್ಲ. ಆದ್ದರಿಂದ ಇರುವವರೆಗೆ ಯಾರಿಗೂ ಕೇಡನ್ನು ಬಯಸದೆ ಒಳ್ಳೆಯ ವಿಚಾರದೊಂದಿಗೆ ಒಳ್ಳೆಯ ನಾಗರೀಕನಾಗಿ ಬಾಳುವುದು ಉತ್ತಮ. ಏಕಲವ್ಯ ನಗರದ ನಿವಾಸಿಯಾಗಿರುವ ಹನುಮಂತಪ್ಪನವರ ಪ್ರಕಾರ ಈ ಜೀವ ದೇವರುಕೊಟ್ಟ ವರ ಹೀಗಾಗಿ ನಾವು ನೂರು ಜನಕ್ಕೆ ಒಳ್ಳೆಯದನ್ನು ಮಾಡಬೇಕು. ಇಲ್ಲದಿದ್ದರೆ ನರಕಕ್ಕೆ ಹೋಗಬೇಕಾಗುತ್ತೆ. ಈ ಶರೀರದಲ್ಲಿ ಜೀವಯಿರುವವರಿಗೂ ಆ ದೇವರ ಹೆಸರಲ್ಲಿ ಜನರಿಗೆ ಸಂತೋಷಪಡಿಸಿ ಕೊಟ್ಟಂತಹದ್ದನ್ನು ಪ್ರಸಾದ ಎಂದು ಸ್ವೀಕಾರ ಮಾಡಿ ಆ ಪರಮಾತ್ಮನ ಧ್ಯಾನ ಮಾಡುವುದೇ ನಮ್ಮ ಆದ್ಯ ಕರ್ತವ್ಯ. ಅವನು ನಮಗೆ ಕೊಟ್ಟ ವರದಾನದಂತೆ ಜನರಿಗೆ ಸಂತೋಷಗೊಳಿಸುವುದು ಆದ ಕೆಲಸ ಮಾಡುತ್ತಾ ಹೆಂಡರು ಮಕ್ಕಳ ಜೊತೆಗೆ ಚೆನ್ನಾಗಿರುವುದು ಮತ್ತೆ ಅವನು ನಮ್ಮನ್ನು ಕರೆದಾಗ ವಾಪಾಸ್ ದೇವರ ಪಾದ ಸೇರುವುದು ಎನ್ನುತ್ತಾರೆ. ಇದೇ ಒಬ್ಬ ವ್ಯಕ್ತಿ ಜನನ ಮತ್ತು ಮರಣದ ಮಧ್ಯ ಮಾಡಬೇಕಾದ ಕರ್ತವ್ಯ. ಈ ಎರಡರ ಮಧ್ಯೆ ನಡೆದ ಜೀನದ ಹೋರಾಟ ಸತ್ಯದಿಂದ ಕೂಡಿರಬೇಕು ಹಾಗೂ ಸ್ವಚ್ಛಂದವಾಗಿರಬೇಕು ಎಂಬುದೇ ಈ ಜನಾಂಗದ

ಮೂಲಮಂತ್ರ. ಈ ರೀತಿಯ ಜೀವನ ಪ್ರಕ್ರಿಯೆಯಲ್ಲಿ ಒಂದೊಂದು ಜನಾಂಗ ತನ್ನದೇ ಆದ ತತ್ವ ಸಿದ್ಧಾಂತವನ್ನು ಪಾಲಿಸುತ್ತಿರುತ್ತಾರೆ. ಹುಟ್ಟಿದಾಗ ಒಂದು ರೀತಿಯ ರೂಢಿ-ಸಂಪ್ರದಾಯವಿದ್ದರೆ ಸತ್ತ ಮೇಲೆ ಇನ್ನೊಂದು ರೀತಿಯ ಸಂಸ್ಕಾರ ರೂಢಿಸಿಕೊಂಡು ಬರುತ್ತಾರೆ. ಮನುಷ್ಯ ಜೀವ ಇರುವವರಿಗೆ ಅವನಿಗಿರುವ ಗೌರವ, ಅಭಿಮಾನ, ತಾನು ತನ್ನನ್ನು ಗೌರವಿಸುವ ರೀತಿ ಹೆಂಡತಿ-ಮಕ್ಕಳು, ಆಸ್ತಿ-ಅಂತಸ್ತು, ಮಾನ-ಮರ್ಯಾದೆ ಎಲ್ಲವೂ ಸತ್ತ ತಕ್ಷಣವೇ ಮಾಯವಾಗುತ್ತವೆ. ಎಂತಹವನೇ ಇರಲಿ ಪಂಚಭೂತಗಳಲ್ಲಿ ಲೀನವಾಗುತ್ತಾನೆ. ಹೀಗಿರುವಾಗ ನಮ್ಮ ಭಾರತೀಯ ಅಷ್ಟೇ ಅಲ್ಲ ಜಗತ್ತಿನಾದ್ಯಂತ ಜನರು ಸತ್ತಾಗ ತಮ್ಮದೇ ಆದ ವಿಧಿ ವಿಧಾನಗಳು ರೂಢಿಸಿಕೊಂಡು ಅದರಂತೆ ಅಂತ್ಯಕ್ರಿಯೆ ನಡೆಸುತ್ತಾರೆ. ಹಾಗೆ ಈ ಶಿಳ್ಳೇಕ್ಯಾತ ಜನಾಂಗದಲ್ಲಿಯೂ ಸಹ ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಇದನ್ನು ನೆರವೇರಿಸುತ್ತಾರೆ.

ಒಂದು ಜನಾಂಗದ ವ್ಯಕ್ತಿ ಸತ್ತಾಗ ಮೊದಲು ಅವನ ಮೈಮೇಲಿನ ಬಟ್ಟೆ ತೆಗೆದು ಸ್ನಾನ ಮಾಡಿಸಿ ಅವನ ಕೈ ಮತ್ತು ಕಾಲುಗಳನ್ನು ಮಡಚಿ ಉಲ್ಟಾ ಬಟ್ಟೆಗಳನ್ನು ಹಾಕಿ, ಮದುವೆ ಆಗಿದ್ದರೆ ಅವನನ್ನು ಮನೆಯ ಮುಂದಿನ ಜಗುಲಿಯ ಮೇಲೆ ಕುಳ್ಳಿರಿಸುತ್ತಾರೆ. ಇಲ್ಲದಿದ್ದರೆ ಅವನನ್ನು ಹಾಗೆಯೇ ಮಲಗಿಸಿ ಸ್ಮಶಾನಕ್ಕೆ ಕರೆದೊಯ್ಯುತ್ತಾರೆ. ಇನ್ನು ಗಂಡು ಸತ್ತಿದ್ದರೆ ಅವನ ಹೆಂಡತಿಯ ಮನೆಯವರು ತಂದಿದ್ದ ಹೊಸ ಬಟ್ಟೆಗಳನ್ನು ಹಾಕುತ್ತಾರೆ. ಇನ್ನು ಹೆಣ್ಣು ಸತ್ತರೆ ಅವರ ಅಕ್ಕ ಅಥವಾ ನಾದನಿಯ ಮನೆಯವರು ಅಥವಾ ಗಂಡನೆ ಬಟ್ಟೆ ತಂದು ಶವಕ್ಕೆ ಹಾಕುತ್ತಾನೆ. ಒಂದು ವೇಳೆ ರಾತ್ರಿ ಏನಾದರೂ ಸತ್ತರೆ ಇಡೀ ಜನಾಂಗದವರು, ವಠಾರದವರು ಕೂಡಿ ಭಜನೆ ಮಾಡುವುದು, ಇಡೀ ರಾತ್ರಿ ಜಾಗರಣೆ (ಎಚ್ಚರವಾಗಿ) ಇರುವುದು ಇವರ ಒಂದು ರೂಢಿ, ಯಾರೇ ಸತ್ತರೂ ಇವರು ತಮ್ಮ ಕುಲಬಾಂಧವರಲ್ಲಿ ಕೆಲವರನ್ನು ಕರೆದು ತಮಗೆ ಸಂಬಂಧಪಟ್ಟ ಸಂಬಂಧಿಕರಿಗೆ ಸುದ್ದಿ ಕಳುಹಿಸುತ್ತಾರೆ. ಅವರೆಲ್ಲರೂ ಬಂದನಂತರ ಶವಸಂಸ್ಕಾರಕ್ಕೆ ಸಿದ್ಧತೆಗೊಳಿಸುತ್ತಾರೆ. ಇಲ್ಲಿ ಕೆಲವರು ಸುಡುತ್ತಾರೆ ಇನ್ನು ಕೆಲವರು 6 x 3 ಅಡಿಯ ಜಾಗದಲ್ಲಿ ಹೂಳುತ್ತಾರೆ. ಹೆಚ್ಚಿನವರು ಹೂಳುವುದೇ ರೂಢಿಯಲ್ಲಿಟ್ಟು-ಕೊಂಡಿದ್ದಾರೆ. ಹೆಚ್ಚಿನವರು ಇವರು ಹಿಂದೆ ಅವರ ತಂದೆ ಅಥವಾ ತಾಯಿಯನ್ನು ಹೂಳಿರುವ ಜಾಗದಲ್ಲಿ ಹೂಳುವ ರೂಢಿ ಇದೆ ಕಾರಣ ತಂದೆ-ಮಕ್ಕಳು ಅಥವಾ ತಾಯಿಮಕ್ಕಳ ಎಲುಬುಗಳು ಒಂದಾಗಲಿ ಅಲ್ಲಿಯೂ ಕೂಡಿಯೇ ಇರಲಿ ಎನ್ನುವುದು ಒಂದು ವಾಡಿಕೆ. ನೆಲ ಅಗಿಯುವಾಗ ಜಾಗಗಳು ಬದಲಾಯಿಸುವುದಿಲ್ಲ. ಒಂದು ಬಾರಿ ಅಗಿದರೆ ಅದೇ ಜಾಗದಲ್ಲಿ ಅಗೆದು ಗುಂಡಿ ತೆಗೆದರೆ ಶುಭ ಎನ್ನುವದರಿಂದ ಮೊದಲೇ ಒಂದು

ಜಾಗವನ್ನು ಪರಿಶೀಲಿಸಿ ಅಲ್ಲಿಯೇ ಸಂಸ್ಕಾರ ಮಾಡುತ್ತಾರೆ. ಆ ಗುಂಡಿಯಲ್ಲಿ ತಲೆ ಇಡುವ ಹಾಗೆ ತೆಗ್ಗುತೋಡಿ ಸರಿಯಾಗಿ ಕೂಡಿಸುತ್ತಾರೆ. ಅದನ್ನು ಯಾವುದೇ ನರಿ-ನಾಯಿ ಪಾಲು ಆಗಬಾರದು ಎನ್ನುವ ಸಲುವಾಗಿ ಇನ್ನು ಹೆಣ ಇಟ್ಟಾಗ ಅದರ ಬಾಯಿ ತೆರೆದಿರಬಾರದು ಹಾಗೆ ಅದರ ಬಾಯಿಯಲ್ಲಿ ಒಂದು ಗುಂಜಿ ಬಂಗಾರ ಅಥವಾ ಬೆಳ್ಳಿ ಕೊನೆಯ ಪಕ್ಷ ಹಣವಾದರೂ ಹಾಕುವ ರೂಢಿ. ಇನ್ನು ಶವವನ್ನು ಮದುವೆಯಾಗಿದ್ದರೆ ಒಳ್ಳೆಯ ಬಿದಿರು ಅಥವಾ ಕಟ್ಟಿಗೆಯಿಂದ 'ಉಚಾಯಿ'ಯನ್ನು ಮಾಡಿ ಒಳ್ಳೆಯ ಪಲ್ಲಕ್ಕಿ ಹಾಗೆ ಶೃಂಗಾರ ಮಾಡಿ ಮೆರವಣಿಗೆ ಮಾಡುತ್ತಾ ಹಲಿಗೆಯನ್ನು ಬಾರಿಸುತ್ತಾ ಆ ಶವಕ್ಕೆ ಕಡಲೇಪುರಿ ಹೂವುಗಳು ಹಾಗೂ ಸಣ್ಣಸಣ್ಣಯಿರುವ ಕಾಳುಗಳು ಹಾಗೂ ಇನ್ನೂ ಕೆಲವರು ಚಿಲ್ಲರೆ ಹಣವನ್ನು ಹಾರಿಸುತ್ತಾ ಹೋಗುತ್ತಾರೆ. ಇಡೀ ಜನಾಂಗದ ಗಂಡು-ಹೆಣ್ಣು ಸೇರಿ ಶವ-ಸಂಸ್ಕಾರ ಮಾಡುತ್ತಾರೆ. ನಂತರ ಅವರ ಜನಾಂಗದ ಹಿರಿಯರು ಕೂಡಿ ಸತ್ತವರಿಗೆ ಮಕ್ಕಳಿದ್ದರೆ ಅವರಲ್ಲಿಯ ಹಿರಿಯವನಿಗೆ ತಂದೆಯ ರುಮಾಲು ಧರಿಸಿ ಅಲ್ಲಿ ನೆರೆದಿರುವ ಎಲ್ಲರಿಗೂ ಈ ಹಣವನ್ನು ಹಂಚುತ್ತಾರೆ. ಮೊದಲು ಹಲಗೆಯವರಿಗೆ, ತಳವಾರಗೆ ಹಂಚಿ ಇನ್ನುಳಿದಂತೆ ಬಂದವರೆಲ್ಲರಿಗೂ ದಾನಮಾಡಿ ಮನೆಗೆ ಹೋಗುತ್ತಾರೆ. ನಂತರ ೩ನೇ ದಿನಕ್ಕೆ ಮನೆಯಲ್ಲಿರುವವರು ಇಡೀ ಮನೆಯನ್ನು ಸ್ವಚ್ಚಗೊಳಿಸಿ ಸತ್ತವನ ಆಶಯದಂತೆ ಅವನಿಗಿರುವ ಚಟಗಳ ಪಟ್ಟಿಮಾಡಿ ಅವನಿಗೆ ಇಷ್ಟವಿರುವ ಅಡುಗೆಯನ್ನು ಮಾಡಿಕೊಂಡು ಗೋರಿಯ ಮೇಲೆ ಇಟ್ಟು ಪೂಜೆಯನ್ನು ಮಾಡಿ ಸುಮಾರು ದೂರದಲ್ಲಿ ಕುಳಿತುಕೊಳ್ಳುತ್ತಾರೆ. ನಂತರ ಕಾಗೆ ಬಂದು ಅದರಲ್ಲಿಯ ಒಂದು ಅಗುಳಾದರೂ ತಿಂದರೆ ಅವನ ಆತ್ಮಕ್ಕೆ ಶಾಂತಿ ಸಿಕ್ಕಿತು ಎಂದರ್ಥ. ಇಲ್ಲದಿದ್ದರೆ ಅವನ ಆತ್ಮ ಇನ್ನು ಇಲ್ಲಿಯೇ ಇದೆ ಎಂಬ ಕಲ್ಪನೆ. ಅಷ್ಟಲ್ಲದೆ ಸತ್ತವನಿಗೆ ಸಾರಾಯಿ, ಸೇಂದಿ, ಕೋಳಿ ಅಥವಾ ಕುರಿಯ ಮಾಂಸವನ್ನು ಇಡುವ ಪದ್ಧತಿ. ನಂತರ ಎಲ್ಲರೂ ಮನೆಗೆ ಬಂದು ಅವರೆಲ್ಲರೂ ಬೀಗರು ನೆಂಟರು ಸೇರಿ ಸೆರೆ-ಸಿಂಧಿ ಕುಡಿದು ತಿಂದು ಮತ್ತೆ ತಮ್ಮ ತಮ್ಮ ಕೆಲಸಕ್ಕೆ ತೆರಳುತ್ತಾರೆ. ಇನ್ನು ಕೆಲವೊಬ್ಬರು ಏಳು ದಿವಸಕ್ಕೆ ಮತ್ತು ಒಂಬತ್ತು ದಿವಸಕ್ಕೆ ದಿನಗಳನ್ನು ಮಾಡುವವರು ಇದ್ದಾರೆ.

ಹೀಗೆ ಈ ಶಿಳ್ಳೇಕ್ಯಾತ ಜನಾಂಗದವರು ಹುಟ್ಟಿದಾಗಲೂ ಸಂಭ್ರಮ ಸತ್ತಮೇಲೆಯೂ ಸಂಭ್ರಮಿಸುವ ಸಂಪ್ರದಾಯದವರು ಇವರು ಪ್ರತಿಯೊಂದನ್ನು ತಮ್ಮ ರೂಢಿ ಸಂಪ್ರದಾಯದಂತೆ ಕಟ್ಟುನಿಟ್ಟಾಗಿ ಒಂದೂ ಆಚರಣೆಯನ್ನು ಬಿಡದೆ ನಿರ್ವಹಿಸುತ್ತಾರೆ.

**ಕುಲಪಂಚಾಯಿತಿ**

ಒಬ್ಬ ವ್ಯಕ್ತಿ ಅಥವಾ ಒಂದು ಸಮಾಜ ಸುವ್ಯವಸ್ಥಿತವಾಗಿ ನಡೆಯಬೇಕಾದರೆ ಆ ಸಮಾಜ ಅಥವಾ ವ್ಯಕ್ತಿಗೆ ತನ್ನದೇ ಆದಂತಹ ಚೌಕಟ್ಟು ಇದ್ದಾಗ ಅದು ಸರಿಯಾದ ರೀತಿಯಲ್ಲಿ ನಡೆಯುತ್ತದೆ. ಇಲ್ಲದಿದ್ದರೆ ಲಗಾಮು ಇಲ್ಲದ ಕುದುರೆಯಂತೆ ಎಲ್ಲಂದರಲ್ಲಿ ವ್ಯಕ್ತಿಯ ಮನಸ್ಸು ಓಡುತ್ತಿರುತ್ತದೆ. ಸಮಾಜದ ವ್ಯವಸ್ಥೆ ಹಾಳಾಗಿ ಅಧೋಗತಿಗೆ ತಲುಪುತ್ತದೆ. ಮನುಷ್ಯರಿಗೂ ಪ್ರಾಣಿಗೂ ಯಾವುದೇ ವ್ಯತ್ಯಾಸವಿರುವುದಿಲ್ಲ. ಆದ್ದರಿಂದ ಮನುಷ್ಯರ ಮತ್ತು ಸಮಾಜದ ಉನ್ನತಿಗೆ ಒಂದು ಸುವ್ಯವಸ್ಥಿತ ಮತ್ತು ಭದ್ರವಾದ ಕಾನೂನು ವ್ಯವಸ್ಥೆಯಿದ್ದರೆ ಆ ಸಮಾಜ ವ್ಯವಸ್ಥಿತವಾಗಿ ಇರುತ್ತದೆ. ಹೀಗಾಗಿ ಪ್ರಪಂಚದ ಯಾವುದೇ ಮೂಲೆಯಲ್ಲಿ ಯಾವುದೇ ಜನಾಂಗ ವಾಸವಾಗಿದ್ದರೂ ಅದು ತನ್ನದೇ ಆದ ಒಂದು ವ್ಯವಸ್ಥಿತ ಕಾನೂನು ವ್ಯವಸ್ಥೆ ನಿರ್ಮಿಸಿಕೊಂಡಿರುತ್ತದೆ. ಅದರಂತೆ ಈ ಅಧ್ಯಯನ ಮುಖ್ಯವಸ್ತುವಾದ ಶಿಳ್ಳೇಕ್ಯಾತ ಜನಾಂಗವು ತನ್ನ ಸುಂದರ ಹಾಗೂ ಸುಭದ್ರ ಜನಾಂಗದ ಒಳಿತಿಗಾಗಿ ಅಚ್ಚುಕಟ್ಟಾದ ನ್ಯಾಯಾಂಗ ವ್ಯವಸ್ಥೆಯನ್ನು ಹೇಗೆ ನಿರ್ಮಿಸಿಕೊಂಡಿದೆ ಎಂಬುದನ್ನು ಇಲ್ಲಿ ವಿವರಿಸುವುದಾಗಿದೆ.

ಈ ಒಂದು ಸಮಾಜದಲ್ಲಿ ಜಾತಿ ಪಂಚಾಯಿತಿಯು ಜಾರಿಯಲ್ಲಿದ್ದು ಇದರ ಮುಖಾಂತರ ಜನಾಂಗದ ಒಳಿತನ್ನು ಕಾಪಾಡಿಕೊಂಡು ಬರುತ್ತಾರೆ. ಈ ಜಾತಿ ಪಂಚಾಯಿತಿಯಲ್ಲಿ ಸಾಳ್ವೆ ಮತ್ತು ಶಿಂಧೆ ಬೆಡಗಿನವರು ಓಲೇಕಾರನ ಕೆಲಸ ನಿರ್ವಹಿಸುತ್ತಾರೆ. ಕಟ್ಟಿಮನಿಯು ನಿರ್ದೇಶಿಸಿದ ಪ್ರತಿಯೊಂದು ಆದೇಶವನ್ನು ಚಾಚುತಪ್ಪದೇ ತಮ್ಮ ಜನಾಂಗದಲ್ಲಿ ಜಾರಿ ಮಾಡಿ ಕೆಲಸ ಮಾಡುತ್ತಾರೆ. ಅದರ ಜೊತೆಗೆ ಏಕಲವ್ಯ ನಗರದ ಒಂದು ಕುಲಪಂಚಾಯಿತಿಯನ್ನು ನಾವು ನೋಡುವುದಾದರೆ ಇಲ್ಲಿ ಅತ್ಯಂತ ವಯಸ್ಸಾದವರು ಹಾಗೂ ಅತ್ಯಂತ ಪ್ರಭಾವಶಾಲಿಯಾದ 'ಗುರು' ವಿದ್ಯಾವಂತ ಹಾಗೂ ಬುದ್ಧಿವಂತ ಅದರ ಜೊತೆಗೆ ತಮ್ಮ ಇಡೀ ಜನಾಂಗದ ಒಳಿತಿಗಾಗಿ ಗಂಡ ಮತ್ತು ಹೆಂಡತಿ ಇವರಿಬ್ಬರು ಶ್ರಮವಹಿಸುವುದರಿಂದ ಯಾವುದೇ ಜನಾಂಗದ ನ್ಯಾಯವಿದ್ದರೂ ಇವರು ಆ ವ್ಯಾಜ್ಯವನ್ನು ತೆಗೆದುಕೊಂಡು ಪರಿಹಾರ ಮಾಡುತ್ತಾರೆ. ಆದರೆ ಈ ಒಂದು ಜನಾಂಗದಲ್ಲಿ ಸಾಳ್ವೆ ಮತ್ತು ಸಿಂಧೆ ಬೆಡಗಿನವರು ಒಳಜಗಳಗಳನ್ನು ಬಗೆಹರಿಸುವುದು, ಶಿಕ್ಷೆ ವಿಧಿಸುವುದು ಹಾಗೂ ದಂಡ ವಸೂಲಿ ಮಾಡುವುದು ಪ್ರತಿಯೊಂದು ಕಾನೂನು ವ್ಯವಸ್ಥೆಗೆ ಸಂಬಂಧಿಸಿದ ಕಾರ್ಯವನ್ನು ತುಂಬಾ ಅಚ್ಚುಕಟ್ಟಾಗಿ ನಿರ್ವಹಿಸುತ್ತಾರೆ.

ಶಿಳ್ಳೇಕ್ಯಾತ ಸಮಾಜದಲ್ಲಿ ಬೇರೆ ಜನಾಂಗದವರಿಗೆ ಆಸ್ಪದವಿಲ್ಲ ತಮ್ಮಲ್ಲಿಯೇ ಇರುವ ಮೇಲ್ವರ್ಗದ ಬೆಡಗುಗಳಿಂದ ಗಣಾಚಾರಿಯನ್ನು ತೆಗೆದುಕೊಂಡು ಪ್ರತಿಯೊಂದನ್ನು ನಿರ್ವಹಿಸುತ್ತಾರೆ. ಇಲ್ಲಿ ಯಾವುದೇ ಗುರುಪೀಠ ಇರುವುದಿಲ್ಲ-ವಾದ್ದರಿಂದ ಇವರು ಗಣಾಚಾರಿಯನ್ನು ಗುರುವಿನ ಸ್ಥಾನದಲ್ಲಿ ನೊಡುತ್ತಾರೆ. ಇಲ್ಲಿ ಮದುವೆ ಇನ್ನಿತರ ಯಾವುದೇ ಸಮಾರಂಭವನ್ನು ನಡೆಯಬೇಕಾದರೆ ಸಿಂಧೆ ಬೆಡಗಿನರು ಕರಿ ಕಂಬಳಿಯನ್ನು ಹಾಸಬೇಕು ಆದರೆ ಏಕಾಏಕಿ ಹಾಸುವಂತಿಲ್ಲ. ಅದಕ್ಕೂ ಸಹ ಅಪ್ಪಣೆ ಪಡೆದು ಹಾಸಬೇಕು. ಅಷ್ಟು ಸಲೀಸಾಗಿ (ಸರಳವಾಗಿ) ಅಪ್ಪಣೆ ದೊರೆಯುವುದಿಲ್ಲ. ಆ ಸಮಾರಂಭಕ್ಕೆ ಸಂಬಂಧಪಟ್ಟ ಎರಡು ಬದಿಯ ವ್ಯಕ್ತಿಗಳನ್ನು ನೋಡಿ ಅವರ ಹಿನ್ನಲೆ ಚೆನ್ನಾಗಿದ್ದರೆ ಮಾತ್ರ ಒಪ್ಪಿಗೆ ದೊರೆಯುತ್ತದೆ. ನಂತರ ಅಲ್ಲಿ ನೆರೆದಂತಹ ವ್ಯಕ್ತಿಗಳಿಗೆ ವಿಭೂತಿ ಹಚ್ಚಬೇಕು ಇದನ್ನು ಸಹ ಅಪ್ಪಣೆ ಮೇರೆಗೆ ಗಣಚಾರಿಯಾದವನು ಹಚ್ಚಿ ತಿಲಕವಿಡುತ್ತಾನೆ. ಒಂದೊಂದು ಬಾರಿ ಹಾಸಿದಂತಹ ಕಂಬಳಿಯ ಮೇಲೆ ವಾರಗಟ್ಟಲೆ ವಿಚಾರಗಳು ನಡೆದಿದೆ ಎನ್ನುತ್ತಾರೆ. ಹೀಗಾಗಿ ಇಲ್ಲಿ ಯಾವುದೇ ರೀತಿಯ ಕಾರ್ಯಕ್ರಮವಾಗಿರಬಹುದು ಅದಕ್ಕೆ ಹಿರಿಯರ ಒಪ್ಪಿಗೆ ಮಹತ್ವವಾದದ್ದು. ಒಂದು ವೇಳೆ ಪಂಚಾಯಿತಿ ಗಮನಕ್ಕೆ ತರದೆ ಕಾರ್ಯ-ನಿರ್ವಹಿಸಿದರೆ ಅದು ಅತ್ಯಂತ ದೊಡ್ಡತಪ್ಪು. ಹಾಗೇನಾದರೂ ಆದರೆ ಅವರನ್ನು ಕರೆದು ದಂಡ ಹಾಕುತ್ತಾರೆ. ಇಲ್ಲದಿದ್ದರೆ ಅವರನ್ನು ಜನಾಂಗದಿಂದ ಹೊರಗಿಡುವ ಪದ್ಧತಿ ಜಾರಿಯಲ್ಲಿದೆ. ಯಾವುದೇ ಜಗಳವಾದರೂ ಇವರು ಕೋರ್ಟ್ ಕಛೇರಿಯೆಂದು ಹೋಗುವುದಿಲ್ಲ. ಒಂದು ವೇಳೆ ಹೋದರೆ ಅದು ಕುಲಕ್ಕೆ ಅವಮಾನ ಎಂಬ ನಂಬಿಕೆ ಇನ್ನೂ ಇವರಲ್ಲಿ ಹಸಿರಾಗಿದೆ. ಹಾಗಾಗಿ ಈ ಮುಂದುವರಿದ ನಾಗರೀಕತ್ವ ನಾಡಿನಲ್ಲಿ ಬದುಕುತ್ತಿರುವ ಈ ಜನರು ಕೋರ್ಟ್ ಕಛೇರಿಗೆ ಎಂದು ಅಲೆದಾಡಿಲ್ಲ. ಆದರೆ ಕೆಲವೊಂದು ನಗರದ (ಏಕಲವ್ಯ) ಏಳ್ಗೆಗಾಗಿ ಎಲ್ಲರೂ ಕೂಡಿ ಡಿ.ಸಿ. ಕಛೇರಿ ಹಾಗೂ ಸಮಾಜಕಲ್ಯಾಣ ಇಲಾಖೆಯೆಂದು ಅಲೆದಾಡುತ್ತಾರೆ. ಅದನ್ನು ಬಿಟ್ಟರೆ ತಮ್ಮ ಒಳಜಗಳಕ್ಕಾಗಿ ಎಂದೂ ಕೋರ್ಟಿಗೆ ಹೋಗಿಲ್ಲ. ಇಲ್ಲಿರುವ ಕೆಲವೊಬ್ಬರು ಗಿಳಿಗಳನ್ನು ಇಟ್ಟುಕೊಂಡಿದ್ದರಿಂದ ಅದಕ್ಕೆ ಪ್ರಾಣಿಪಕ್ಷಿ ಹಿತರಕ್ಷಣಾ ವೇದಿಕೆಯವರು ಇವರನ್ನು ಜೈಲಿಗೆ ಕರೆದೊಯ್ಯುವುದಾಗಿ ಬೆದರಿಸಿದ್ದುಂಟು. ಅದನ್ನೆ ತಮ್ಮ ಕರ್ಮ ಎಂದು ಭಾವಿಸಿ ತಮ್ಮ ಗುಡಿಸಲುಗಳನ್ನು ಹಸುವಿನ ಗಂಜಲಿನಿಂದ ತೊಳೆಯುವುದೂ ಈ ಸಮುದಾಯದಲ್ಲಿ ರೂಢಿಯಲ್ಲಿದೆ.

ಇವರಲ್ಲಿ ತಮ್ಮದೇ ಆದ ಕೆಲವೊಂದು ಕಾನೂನುಗಳಿವೆ. ಅವುಗಳಾವುವುವೆಂದರೆ ಜನಾಂಗದ ಮುಖಂಡರೆ ಕೂಡಿಕೊಂಡು ಕೆಲವೊಂದು ಊರುಗಳನ್ನು ಒಂದೊಂದು ಗುಂಪಿಗೆ ಹಂಚಿಕೊಟ್ಟಿರುತ್ತಾರೆ. ಅ ಹಂಚಿಕೆಯಾದ ಊರಿಗೆ ಅದೇ ಗುಂಪಿನವರು

ಹೋಗಬೇಕು. ಬೇರೆಯವರು ಆ ಊರೊಳಗೆ ಯಾವುದೇ ಕಲೆ ಪ್ರದರ್ಶನ ಮಾಡುವ ಹಾಗಿಲ್ಲ. ಇಡೀ ಜನಾಂಕ್ಕಾಗಿ ನಿರ್ಮಿಸಿರುವ ದೇವಸ್ಥಾನದಲ್ಲಿ ಎಲ್ಲರೂ ಪೂಜೆ ಪುನಸ್ಕಾರ, ಒಳ್ಳೆಯ ಕಾರ್ಯಗಳು ನಡೆಸುತ್ತಾರೆ. ಅದನ್ನು ಬಿಟ್ಟು ಓಣಿಗೊಂದು ದೇವರಮನೆ ಮಾಡಿ ಅವರವರೇ ಪೂಜೆ ಮಾಡುವ ಹಾಗಿಲ್ಲ. ದೈವದ ಕಾರ್ಯಕ್ಕೆ ಹಣ ಕೊಡುತ್ತೇನೆಂದು ಅವರು ಅದರಿಂದ ತಪ್ಪಿಸಿಕೊಳ್ಳುವ ಹಾಗಿಲ್ಲ. ಹಾಗೇನಾದರೂ ಆದರೆ ಅವರು ದಂಡಕ್ಕೆ ಗುರಿಯಾಗುತ್ತಾರೆ. ಗಂಡನಿರುವ ಹೆಣ್ಣನ್ನು ಓಡಿಸಿಕೊಂಡು ಹೋದರೆ ಅದಕ್ಕೆ ಶಿಕ್ಷೆ ಮತ್ತು ದಂಡ ಎರಡಕ್ಕೂ ಓಡಿಸಿಕೊಂಡು ಹೊಣೆಗಾರನಾಗುತ್ತಾನೆ. ಒಂದುವೇಳೆ ಮುಂದೆ ಹೆಣ್ಣನ್ನು ಬಿಡಬಾರದು ಬಿಟ್ಟರೆ ಅದು ಕುಲಕ್ಕೆ ಅವಮಾನ. ಹೀಗೆ ಹೋದವನೆ ಈ ನಿಯಮವನ್ನು ಚಾಚು ತಪ್ಪದೇ ಪ್ರತಿಯೊಬ್ಬರೂ ಪಾಲಿಸಬೇಕು ಇಲ್ಲದಿದ್ದರೆ ದಂಡ ತೆರಬೇಕಾಗುತ್ತದೆ. ಇನ್ನು ವ್ಯಭಿಚಾರ, ಅತ್ಯಾಚಾರ, ಪಂಚಾಯಿತಿಯ ಸಂದರ್ಭದಲ್ಲಿ ಸುಳ್ಳು ಹೇಳುವುದು, ಬೇರೆ ಜಾತಿಯವರಿಗೆ ತಮ್ಮ ಕುಟುಂಬದ ಗುಟ್ಟುಗಳನ್ನು ಹೇಳುವಂತಿಲ್ಲ. ನ್ಯಾಯ-ಪಂಚಾಯಿತಿಯವರಿಗೆ ಅವಾಚ್ಯ ಶಬ್ದಗಳಿಂದ ಬೈಯ್ಯುವಂತಿಲ್ಲ. ಕುಲಪಂಚಾಯಿತಿಗೆ ಬರುವಾಗ ಚಪ್ಪಲಿ ಧರಿಸುವಂತಿಲ್ಲ. ಕೈಯಲ್ಲಿ ಬಡಿಗೆ ಇತರ ಆಯುಧಗಳನ್ನು ತರುವಂತಿಲ್ಲ. ಮಕ್ಕಳು ಹೆಣ್ಣುಮಕ್ಕಳು ಏನಾದರೂ ಜಗಳವಾಡಿದರೆ ಅದು ಅಲ್ಲಿಯೇ ಪರಿಹಾರವಾಗಬೇಕು ಬೀದಿಗೆ ಬರುವಂತಿಲ್ಲ. ಒಂದುವೇಳೆ ಹಿರಿಯರಿಗೆ ಗೊತ್ತಾದರೆ ಸ್ವತಃ ಅವರನ್ನು ಕರೆದು ಇಬ್ಬರಿಗೆ ಬೈದು ಬುದ್ಧಿ ಹೇಳಿ ಇನ್ನೊಮ್ಮೆ ಹಾಗೇ ಮಾಡದ ಹಾಗೆ ತಿಳಿಸುತ್ತಾರೆ. ಇಲ್ಲಿದಿದ್ದರೆ ಅವರಿಬ್ಬರನ್ನು ದೇವರ ಹೆಸರಲ್ಲಿ ಪ್ರಮಾಣ ಮಾಡಿಸಿ ಕಳುಹಿಸುತ್ತಾರೆ.

ಇದಲ್ಲೆದಕ್ಕೂ ಮೀರಿ ಜಗಳವಾದರೆ ವಿವಾಹ ವಿಚ್ಛೇದನವಾದರೆ ಅಥವಾ ಅತ್ಯಾಚಾರವಾದ ಹೆಣ್ಣನ್ನು ಕಟ್ಟಿಕೊಂಡರೆ ಅಥವಾ ಎರಡು ಕುಟುಂಬಗಳ ಮಧ್ಯೆ ಭೀಕರವಾದ ಜಗಳವಾಗಿ ಪರಿಹಾರವಾಗದಿದ್ದರೆ, ಇವುಗಳು ದೈವ ಪಂಚಾಯಿತಿಯ ಎದುರಿಗೆ ಬರುತ್ತವೆ. ಅಂತಹ ಜಗಳಗಳನ್ನು ನ್ಯಾಯಾಧಿಕಾರಿಯಾದ ಕಟ್ಟಿಮನಿ ಬಿಡಾರಗಳಲ್ಲಿ ಡಂಗೂರ ಸಾರಿಸುತ್ತಾನೆ. ನಂತರ ಮರುದಿನ ಎಲ್ಲರ ಸಮಕ್ಷಮದಲ್ಲಿ (ಎದುರಿಗೆ) ವಾದ-ವಿವಾದಗಳನ್ನು ಇಬ್ಬರ ಕಡೆಯಿಂದ ಅಲ್ಲಿರುವ ಪಂಚಾಯಿತಿ-ಯವರು ಆಲಿಸುವರು ಅಲ್ಲಿ ಯಾರೂ ಜಗಳವಾಗಲಿ ಅಥವಾ ಸುಳ್ಳಾಗಲಿ ಹೇಳುವಂತಿಲ್ಲ. ಪ್ರತಿಯೊಬ್ಬರು ನಿಯಮವನ್ನು ಪಾಲಿಸಲೇಬೇಕು. ಇಲ್ಲಿ ಹೆಣ್ಣುಮಕ್ಕಳು ಮತ್ತು ಮಕ್ಕಳು ಸಾಕ್ಷಿ ಹೇಳುವಂತಿಲ್ಲ ಹೀಗಾಗಿ, ಕಟ್ಟಿಮನಿಯೇ ಈ ಇಬ್ಬರ ವಾದ-

ವಿವಾದಗಳನ್ನು ಕೇಳಿ ನ್ಯಾಯ ತೀರ್ಮಾನವನ್ನು ಮಾಡುವರು. ಕೆಲವೊಮ್ಮೆ ರಾಜಿಮಾಡಿಸಿ ಇಲ್ಲದಿದ್ದರೆ ದಂಡ, ಬಹಿಷ್ಕಾರ ಆಯಾ ಕಟ್ಟಲೆಗೆ ಸಂಬಂಧಿಸಿದಂತೆ ನ್ಯಾಯ ಒದಗಿಸುವರು. ಅವರು ಮಾಡಿದ ತೀರ್ಮಾನ ಯಾರೂ ಮುರಿಯುವಂತಿಲ್ಲ. ಕಟ್ಟಿಮನಿಯ ಮುಂದೆ ಎಲ್ಲರೂ ಸಮಾನರು ಅವರ ಮಾತೇ ವೇದವಾಕ್ಯ ಹೀಗಾಗಿ ಯಾರೂ ಮಿರುವಂತಿಲ್ಲ, ಅವರು ಕೊಟ್ಟ ಸಿಕ್ಷೆ ಶಿರಸಾವಹಿಸಿ ಪಾಲಿಸುತ್ತಾರೆ.

ಹೀಗೆ ಸಮಾಜದ ಹಿತಕ್ಕಾಗಿ ತಪ್ಪಿಗೆ ತಕ್ಕಂತೆ ಶಿಕ್ಷೆಯನ್ನು ವಿದಿಸುವುದರಿಂದ ಯಾರೂ ತಪ್ಪು ಮಾಡುವುದಿಲ್ಲ. ಅಲ್ಲಿ ಜಗಳಗಳಾಗುವುದೇ ಅಪರೂಪ ಕೆಲವೊಮ್ಮೆ ಕುಡಿದು ಗಲಾಟೆಗಳು ಆಗುತ್ತವೆ. ಆದರೆ ಮರುದಿವಸ ಜಗಳವಾಡಿದವರಿಬ್ಬರು ಕೂಡಿಯೆ ಕೆಲಸಕ್ಕೆ ಹೋಗುತ್ತಾರೆ. ಕಾರಣ ಅದನ್ನೇ ಮುಂದುವರಿಸಿಕೊಂಡು ಹೋದರೆ ಕುಲಪಂಚಾಯಿತಿಗೆ ಹೋಗಬೇಕು ಅವರು ಕೊಡುವಂತಹ ಶಿಕ್ಷೆಗೆ ಬಲಿಯಾಗಬೇಕು ಅದಕ್ಕಿಂತಲೂ ಮಿಗಿಲಾಗಿ ಈ ರೀತಿಯ ಜಗಳ ಜೂಟಿ ಮಾಡುವುದು ಕುಲಕ್ಕೆ ಅವಮಾನವಾಗುವುದರಿಂದ ಏನೇ ಇದ್ದರೂ ಅ ಗುಡಿಸಲುಗಳು ಒಳಗೆ ಬಗೆಹರಿಸಿಕೊಂಡು ಹೋಗುವ ರೂಢಿ ಇವತ್ತಿಗೂ ಇದೆ. ಇವರು ಊರೂರು ಆಟಗಳನ್ನು ಪ್ರದರ್ಶನ ಮಾಡಲು ಹೋದಾಗ ರಾತ್ರಿಯಿಡೀ ಜಗಳವಾಡುತ್ತಾರೆ. ಆದರೆ ಮುಂಜಾನೆ ಅವರೆಲ್ಲರೂ ಕೂಡಿಯೇ ತಮ್ಮ ಕಲೆ ಪ್ರದರ್ಶನ ಮಾಡುತ್ತಾರೆ. ಇವರ ಜಗಳ ಎನೇ ಇದ್ದರೂ ಅದು ಉಂಡು ಮಲಗುವ ತನಕ.

**ವಾಸಸ್ಥಾನ/ಮನೆ:** ಶಿಳ್ಳೇಕ್ಯಾತ ಜನಾಂಗವು ಮೈಸೂರಿನಿಂದ ಹದಿನೈದು ಕಿಲೋಮೀಟರ್ ದೂರದಲ್ಲಿರುವ ಕೈಗಾರಿಕಾ ಪ್ರದೇಶವಾದ ಏಕಲವ್ಯನಗರ ಎಂಬಲ್ಲಿ ಸುಮಾರು ಹತ್ತು ವರ್ಷಗಳಿಂದ ವಾಸಿಸುತ್ತಿದ್ದಾರೆ. ಇದಕ್ಕಿಂತ ಮುಂಚೆ ಇವರು ಹೆಬ್ಬಾಳು ಮತ್ತು ಮೈಸೂರಿನ ಸುತ್ತಮುತ್ತಲಿನ ಖಾಲಿ ಪ್ರದೇಶದಲ್ಲಿ ವಾಸಿಸುತ್ತಿದ್ದರು. ಆದರೆ ಈಗ ಇಲ್ಲಿ ೩೫೪ ಕುಟುಂಬಗಳು ಒಟ್ಟಿಗೆ ಒಂದೇ ಕಡೆ ನೆಲೆಸುತ್ತಿದ್ದಾರೆ ಈ ಮುನ್ನೂರಾ ಐವತ್ನಾಲ್ಕು ಕುಟುಂಬಗಳಲ್ಲಿ ಒಂದನೂರಾ ಅರವಾತ್ನಾಲ್ಕು ಕುಟುಂಬಗಳು ಶಿಳ್ಳೇಕ್ಯಾತರಾಗಿದ್ದು ಉಳಿದವರು ದೊಂಬಿದಾಸ, ಕೊರಮ, ಈಡಿಗ, ಉಪ್ಪಾರರು ಹಾಗೂ ಕೆಲವೊಂದು ವಿಶ್ವಕರ್ಮ ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಆದರೆ ಶಿಳ್ಳೇಕ್ಯಾತರೆ ಹೆಚ್ಚಿನವರಾಗಿದ್ದು ಒಟ್ಟು ೬೯೮ ಜನ ಇಲ್ಲಿ ವಾಸವಾಗಿದ್ದಾರೆ. (ಅದರಲ್ಲಿ ಹೆಣ್ಣು ಗಂಡು ಮತ್ತು ಮಕ್ಕಳನ್ನೊಳಗೊಂಡಿದೆ (೨೦೧೩ ಮಾರ್ಚ್) ಇಲ್ಲಿರುವ ಎಲ್ಲಾ ಮನೆಗಳು ಗುಡಿಸಲುಗಳಾಗಿದ್ದು ತೆಂಗಿನ ಪೊರಕೆ ಮತ್ತು ಹುಲ್ಲುಗಳಿಂದ ಹೊದಿಸಲಾದವುಗಳಾಗಿದ್ದು ಕೆಲವೊಂದು ಮನೆಗಳು ಮಾತ್ರ ಮೇಲ್ಗಡೆ ಶೀಟುಗಳನ್ನು

ಹಾಕಿಕೊಂಡು ವಾಸವಾಗಿದ್ದು ಕಾಣಿಸುತ್ತವೆ. ಹಲವಾರು ಮನೆಗಳು ಅಡಿಗೆಮನೆ ವಾಸದ ಮನೆ ಒಂದೆ ಗುಡಿಸಲಿನಲ್ಲಿದ್ದುದ್ದು ಗಮನಾರ್ಹ. ಇನ್ನೂ ಕೆಲವೊಂದು ಮನೆಗಳಲ್ಲಿ ಅಡಿಗೆಮನೆ ಮತ್ತು ದೇವರ ಮನೆ ಒಂದರಲ್ಲಿ ಹಾಗೂ ಪಡಸಾಲೆಯಲ್ಲಿ ಅಡಿಗೆ ಮನೆಯನ್ನು ನಾವು ಕಾಣಬಹುದು. ಬಹುತೇಕ ಜನರ ಮನೆಯ ಹೊರಗಡೆ ಬಚ್ಚಲು ಮನೆ ಮಾಡಿಕೊಂಡು ಅದರಲ್ಲಿಯೇ ಬಟ್ಟೆ ತೊಳೆಯುವುದು ಮತ್ತು ಸ್ನಾನ ಮಾಡುವುದನ್ನು ಕಾಣುತ್ತೇವೆ. ಈ ಬಚ್ಚಲುಮನೆ ತೆಂಗಿನ ಪೊರಕೆಯಿಂದ/ ಗರಿಯಿಂದ ಅಥವಾ ಸಿಮೆಂಟ್ ಚೀಲಗಳಿಂದ ನಾಲ್ಕು ಕಡೆ ಮುಚ್ಚಲಾಗಿದ್ದು ಮೇಲ್ಗಡೆ ಹಾಗೆ ಖಾಲಿ ಇರುತ್ತದೆ. ಇನ್ನೂ ಕೆಲವೊಬ್ಬರ ಖುಲ್ಲಾ ಜಾಗದಲ್ಲಿ ಬೆಳಿಗ್ಗೆ ಬೇಗ ಎದ್ದು ಸ್ನಾನ ಮುಗಿಸಿಕೊಳ್ಳುತ್ತಾರೆ. ಮೊದಲು ಅಲ್ಲಿ ಕುಡಿಯುವ ನೀರಾಗಲಿ ವಿದ್ಯುತ್ ದೀಪವಾಗಲಿ ಇರಲಿಲ್ಲ. ಆಗ ಅವರು ದೂರದ ಕೈಗಾರಿಕಾ ಪ್ರದೇಶಕ್ಕೆ ಹೋಗಿ ನೀರನ್ನು ತರಬೇಕಾಗುತ್ತಿತ್ತು. ಆದರೆ ಈಗ ಸರಕಾರ ನೀರಿನ ಕೊಳವೆಗಳನ್ನು ಹಾಕಿಸಿದ್ದು ಈಗ ಯಾವುದೇ ನೀರಿನ ತಾಪತ್ರೆ ಕಾಣಿಸುವುದಿಲ್ಲ. ಭಾಗ್ಯಜ್ಯೋತಿ ಯೋಜನೆಯಡಿ ಕರೆಂಟ್ ಒದಗಿಸಿದ್ದು ಇಂದು ವಿದ್ಯುತ್ ದೀಪದಡಿಯಲ್ಲಿ ವಾಸಿಸುತ್ತಾರೆ. ಈ ಎರಡು ರೀತಿಯ ಸವಲತ್ತುಗಳನ್ನು ಬಿಟ್ಟರೆ ಯಾವುದೇ ಸವಲತ್ತುಗಳಿಲ್ಲ. ಇನ್ನೂ ಇವರು ಕಕ್ಕಸು ಮಾಡಲು ಬಯಲನ್ನೇ ನಂಬಿಕೊಂಡಿದ್ದಾರೆ. ಇಂದಿಗೂ ಮಳೆಗಾಲದಲ್ಲಿ ಸಾಕಷ್ಟು ತಾಪತ್ರೆಯಗಳು ಅವರು ಅನುಭವಿಸುತ್ತಾರೆ. ಆ ಮನೆಯಲ್ಲಿ ಇಬ್ಬರು ಹೆಚ್ಚೆಂದರೆ ಮೂರು ಜನ ಮಗಲಬಹುದು ಉಳಿದವರು ಮತ್ತೆ ಗುಡಿ–ಗುಂಡಾರವೇ ಗತಿ. ಹೀಗೆ ಅಲ್ಲಿ ಇಲ್ಲಿ ಮಲಗಿ ಜೀವನ ಕಳೆಯುತ್ತಾರೆ. ಕೆಲವೊಂದು ಸರಕಾರೇತರ ಸಂಸ್ಥೆಗಳ ಸಹಾಯದಿಂದ ಮತ್ತು ಸರಕಾರದ ಸಹಾಯದಿಂದ ಮಕ್ಕಳ ವಿದ್ಯಾಭ್ಯಾಸವು ಅಲ್ಪಸ್ವಲ್ಪ ನಡೆಯುತ್ತಿವೆ. ಈಗ ಭಾರತ ಸರಕಾರದ ನರ್ಮ್ ಯೋಜನೆಯಡಿ ಬೃಹತ್ ಕಟ್ಟಡ ಕಟ್ಟಿಸುತ್ತಿದ್ದಾರೆ. ಆದರೆ ಅದರಲ್ಲಿ ವಾಸ ಮಾಡುವ ಭಾಗ್ಯ ಯಾವಾಗ ದೊರೆಯುತ್ತದೆ. ಗೊತ್ತಿಲ್ಲ. ಹೀಗಾಗಿ ಈ ಜನಾಂಗದ ವಾಸಿಸುವ ವ್ಯವಸ್ಥೆ ಪ್ರಾಣಿಗಳಿಗಿಂತಲೂ ಕಡೆಯಾಗಿದೆ. ಒಟ್ಟಾರೆ ಇಂದಿನ ಹಳೆಯ ತಲೆಮಾರಿನ ಗುಡ್ಡಗಾಡಿನ ಜೀವನವನ್ನೇ ಸಾಗಿಸುತ್ತಾ ಬರುತ್ತಿದ್ದಾರೆ.

**ಶಿಕ್ಷಣ:** ಏಕಲವ್ಯನಗರ ಮೈಸೂರಿಗೆ ತುಂಬಾ ಹತ್ತಿರವಾಗಿರುವುದರಿಂದ ಇಲ್ಲಿ ಅಂಗನವಾಡಿ ಮತ್ತು ಕೈಗಾರಿಕಾ ಪ್ರದೇಶದಲ್ಲಿನ ಸರಕಾರಿ ಶಾಲೆಗಳಿಗೆ ಮಕ್ಕಳು ಶಿಕ್ಷಣ ಪಡೆಯುವುದಕ್ಕಾಗಿ ಹೋಗುತ್ತಾರೆ. ಅವಿದ್ಯಾವಂತರಾದ ಶಿಳ್ಳೇಕ್ಯಾತರು ತಮ್ಮ ಮಕ್ಕಳು ತಮ್ಮ ತರಹ ಆಗಬಾರದೆಂದು ಒಂದೇ ಕಡೆ ನೆಲೆಯೂರಿ ತಾವು ಗಾರೆ ಕೆಲಸಮಾಡಿ

ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿದ್ದಾರೆ. ಚಿಕ್ಕಮಕ್ಕಳಿಗಾಗಿ ಏಕಲವ್ಯ ನಗರದಲ್ಲಿಯೇ ಅಂಗನವಾಡಿಯಿದ್ದು ಪ್ರಾಥಮಿಕ ವಿದ್ಯಾಭ್ಯಾಸಕ್ಕಾಗಿ ಮಕ್ಕಳು ಹತ್ತಿರದ ಕೆ.ಆರ್.ಎಸ್. ಸರಕಾರಿ ಶಾಲೆಗೆ ಹೋಗುತ್ತಾರೆ. ಇವತ್ತು ಇಲ್ಲಿನ ೨೫೫ ಶಿಳ್ಳೇಕ್ಯಾತ ಕುಟುಂಬಗಳಿದ್ದು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಿಕೊಡುತ್ತಿದ್ದಾರೆ. ಇಲ್ಲಿ ಇನ್ನೊಂದು ಸಂತೋಷದ ವಿಷಯವೆಂದರೆ ಇಬ್ಬರ ಪದವಿ ಪಡೆದಿದ್ದು ಇನ್ನು ೩೦ ಕ್ಕೂ ಹೆಚ್ಚು ಜನ ಪ್ರೌಢಶಿಕ್ಷಣ ಪಡೆದಿರುವುದು ಗಮನಾರ್ಹ. ಇಲ್ಲಿ ವಾಸಿಸುವ ಪ್ರತಿಯೊಬ್ಬ ಶಿಳ್ಳೇಕ್ಯಾತನಿಗೂ ತಮ್ಮ ಮಕ್ಕಳು ವಿದ್ಯಾವಂತರಾಗಬೇಕೆಂಬ ಹಂಬಲ ಇದೆ. ಇನ್ನೂ ಕೆಲವೊಂದು ಮಕ್ಕಳು ಪ್ರಾಥಮಿಕ ಶಿಕ್ಷಣ ಮುಗಿದ ನಂತರ ವಸತಿ ಶಾಲೆಗಳಲ್ಲಿ ತಮ್ಮ ವಿದ್ಯಾಭ್ಯಾಸ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ.

ಒಟ್ಟಾರೆ ಇಲ್ಲಿ ನಗರಪ್ರದೇಶದ ಪ್ರಭಾವದಿಂದ ಪ್ರತಿಯೊಬ್ಬ ಶಿಳ್ಳೇಕ್ಯಾತನು ಶಿಕ್ಷಣದ ಅರಿವು ಹಾಗೂ ಅದರ ಮಹತ್ವವನ್ನು ತಿಳಿದುಕೊಂಡು ತಮ್ಮ ಮಕ್ಕಳ ಉಜ್ವಲ ಭವಿಷ್ಯಕ್ಕಾಗಿ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸುವ ಪಣತೊಟ್ಟಿದ್ದಾರೆ. ಭಿಕ್ಷೆ ಬೇಡಿಯಾದರೂ ಸರಿ ಮಕ್ಕಳು ಓದಬೇಕು ಎಂಬ ಛಲದಿಂದ ಮಕ್ಕಳ ಭವಿಷ್ಯದ ಕಡೆ ಗಮನಹರಿಸುತ್ತಿದ್ದಾರೆ.

**ಜನಪದ ವೈದ್ಯ:** ಶಿಳ್ಳೇಕ್ಯಾತ ಜನಾಂಗದ ಬಹುತೇಕರು ಇಂದಿಗೂ ನಾಟಿವೈದ್ಯ ಪದ್ಧತಿಯನ್ನು ಬಳಸುತ್ತಿದ್ದು ಅವರು ಅದನ್ನೇ ಕಸುಬನ್ನಾಗಿ ಮಾಡಿಕೊಂಡಿದ್ದಾರೆ. ಇವರು ತಲೆ–ತಲಾಂತರದಿಂದ ಬಂದ ಈ ವೈದ್ಯಪದ್ಧತಿಯನ್ನು ಹಿರಿಯರಿಂದ ಕಲಿತುಕೊಂಡಿದ್ದು ಅದನ್ನೇ ಇಂದಿಗೂ ಬಳಸುತ್ತಾ ಬಂದಿದ್ದಾರೆ. ಕಾಡಿನಲ್ಲಿ ಸಿಗುವ ಕೆಲವೊಂದು ಗಿಡಮೂಲಿಕೆಗಳನ್ನು ಗುರುತಿಸಿಕೊಂಡು ತಮ್ಮದೇ ಆದ ರೀತಿಯಲ್ಲಿ ಅದನ್ನು ತಯಾರಿಸಿ ಯಾವ ರೋಗಕ್ಕೆ ಮತ್ತು ಎಷ್ಟು ಕೊಡುವುದು ಎಂಬುದನ್ನು ತಿಳಿದುಕೊಂಡು ಅದನ್ನು ಸಮಯಕ್ಕನುಸಾರವಾಗಿ ಬಳಸುತ್ತಾರೆ. ಅವುಗಳನ್ನು ಹಳ್ಳಿಗಳಲ್ಲಿರುವ ಜನರಿಗೂ ಕೊಡುತ್ತಾ ತಮ್ಮ ಜೀವನವನ್ನು ನಡೆಸುತ್ತಾರೆ. ವಯಸ್ಸಾದ ವಯೋವೃದ್ಧರು ಇದರ ಬಗ್ಗೆ ಸಾಕಷ್ಟು ಅರಿವನ್ನು ಮೂಡಿಸಿಕೊಂಡು ತಾವು ಮತ್ತು ತಮ್ಮ ಮಕ್ಕಳನ್ನು ಇದನ್ನು ಹಳ್ಳಿಹಳ್ಳಿಗೂ ಹೋಗಿ ಸ್ವತಃ ಅವರೇ ಪರಿಚಯಿಸಿಕೊಂಡು ರೋಗಕ್ಕನುಸಾರವಾಗಿ ಕೊಡುತ್ತಾರೆ. ಇವರಲ್ಲಿ ಕೆಲವೊಬ್ಬರು ಔಷಧಿಗಾಗಿ ದುಡ್ಡನ್ನು ತೆಗೆದುಕೊಂಡರೆ ಇನ್ನೂ ಕೆಲವೊಬ್ಬರು ದವಸಧಾನ್ಯಗಳನ್ನು ತೆಗೆದುಕೊಳ್ಳುತ್ತಾರೆ. ಶಿಳ್ಳೇಕ್ಯಾತರು ಬಳಸುವ ವಿಧಾನ ಮತ್ತು ಔಷಧಿಗಳನ್ನು ಈ ಕೆಳಗೆ ವಿವರಿಸಲಾಗಿದೆ.

**ಕೆಮ್ಮು:** ದಿವಸಕ್ಕೆ ಒಂದರಿಂದ ಎರಡು ಕರಿಕಾಯಿ ಮೂರು ದಿನ ತಿಂದರೆ ಬಂದಂತಹ ಕೆಮ್ಮು ನಿಲ್ಲುತ್ತದೆ. ಒಂದು ವೇಳೆ ಮಕ್ಕಳಿಗೆ ಕೆಮ್ಮು ಬಂದರೆ ಅಜವಾನ, ಜೀರಿಗೆ ಸುಂಟಿ, ಲವಂಗ ಪುಡಿಮಾಡಿ ಒಂದು ಚಮಚೆಯಷ್ಟು ನೀರಿನಲ್ಲಿ ಹಾಕಿ ಅದನ್ನು ಕಾಯಿಸಿ ಎರಡು ದಿವಸ ಕುಡಿಸಿದರೆ ಮಗುವಿನ ಕೆಮ್ಮು ದೂರವಾಗುವುದು ಇನ್ನೂ ಕೆಲವರು ಮಗುವಿಗೆ ಜೇನುತುಪ್ಪ ಮತ್ತು ಶುಂಠಿ ಕುದಿಸಿ ಕುಡಿಸುವುದರಿಂದಲೂ ಅದರಿಂದ ಪರಿಹಾರ ಕಂಡುಕೊಳ್ಳಬಹುದು.

ಮಗು ಯಾವಾಗಲೂ ಕೆಮ್ಮುತ್ತಿದ್ದರೆ ಅದಕ್ಕೆ ಬೆಳ್ಳುಳ್ಳಿ ಹಾಕಿ ಕುತ್ತಿಗೆಯಲ್ಲಿ ಕಟ್ಟುವುದರಿಂದಲೂ ವಾಸಿಯಾಗುತ್ತದೆ ಎನ್ನುತ್ತಾರೆ.

**ಕಾಲಿನ ಹುಣ್ಣು:** ಕಾಲಿಗೆ ಹುಣ್ಣು ಬೇಗ ವಾಸಿಯಾಗದಿದ್ದರೆ ಒಂದು ಕೊಬ್ಬರಿ ಗುಂಡನ್ನು ಸುಟ್ಟು, ಅದರಲ್ಲಿ ವೀಳ್ಯದ ಎಲೆ ಹಾಗೂ ದಶಲಕ್ಕಿ ಬೇರು ಹಾಕಿ ಕಲಿಸಿ ಒಂದು ವಾರ ಅದಕ್ಕೆ ಕೊಬ್ಬರಿ ಎಣ್ಣೆಯಲ್ಲಿ ಕಲಿಸಿ ಹಚ್ಚಿದರೆ ಅದು ಮಾಯವಾಗುತ್ತದೆ.

**ವೀರ್ಯಸ್ಖಲನ:** ಹೊಸ ಮಡಕೆಯನ್ನು ತೆಗೆದುಕೊಂಡು ಅದರಲ್ಲಿ ಬನ್ನಿ ಮುಗಳು ಕಡೆದು ಕುಟ್ಟಿ ರಸಮಾಡಿ ಅದಕ್ಕೆ ಸಕ್ಕರೆ ಹಾಕಿ ಅದರ ಜೊತೆಗೆ ಏಲಕ್ಕಿ ಹಾಕಿ ಒಂದು ವಾರ ಕುಡಿದರೆ ವೀರ್ಯಾಸ್ಖಲನದಿಂದ ಮುಕ್ತಿ ಪಡೆಯಬಹುದು.

**ಮೊಳಕಾಲನೋವು:** ದಿನಾ ಮುಂಜಾನೆ ಸೂರ್ಯ ಹುಟ್ಟುವುದರೊಳಗೆ ಎಕ್ಕದ ಹಾಲನ್ನು ಮೊಳಕಾಲಿಗೆ ಒಂದು ವಾರ ಹಚ್ಚಿದರೆ ನೋವು ಕಡಿಮೆಯಾಗುವುದು.

ಹೊಟ್ಟೆನೋವು: ಇಂಗು ಹುಣಸಿ ಬೀಜದಷ್ಟು ಹೋಳು ಮೆಣಸಿನಕಾಳು ಹೋಳು ಬೆಳ್ಳೊಳ್ಳಿ ಬ್ಯಾಳಿ ಮೂರು ದಿನಸು ಎರಡು ತಟಕು ದಡಲ ಎಣ್ಣೆಯಲ್ಲಿ ಅರೆದು ಒಂದು ಗುಳಿಗಿಯಷ್ಟು ಅಂಗಳ ಒಳಗೆ ಹಾಕಿ ಬಿಸಿ ನೀರು ಕುಡಿಯಬೇಕು. ಹವೀಜಾ ತೂಕಾ, ಬಿಲ್ಲಿ ತೂಕ ಮೆಣಸು, ಬಿಲ್ಲಿತೂಕ ಬೆಳ್ಳುಳ್ಳಿ ಮೂರು ದಿನಸು ಕುದಿಸಿ ಅದರ ಕಷಾಯದೊಳಗೆ ಎರಡು ತಟಕು ತುಪ್ಪಹಾಕಿ ಕುದಿಸಿ ಕುಡಿಸಿದರೆ ಹೊಟ್ಟೆನೋವು ಬಾರದು.

**ತಲೆನೋವು:** ಚಹದ ಬೇರು, ಒಂದಿಷ್ಟು ಶುಂಠಿ ಹಾಗೂ ಎರಡಕಾಳು ಕರಿಮೆಣಸ ಹಾಕಿಕೊಂಡು, ಸ್ವಲ್ಪ ಸಕ್ಕರಿ ಕೂಡಿಸಿ ಕಾಯಿಸಿ ಕುಡಿದರೆ ತಲೆನೋವು ಮಾಯ.

**ಜ್ವರಕೆಮ್ಮು:** ಕಸ್ತೂರಿ, ಸದಾಪಾ, ರಂಜನಾ ಹಿಪ್ಪಲ ಒಂದು ದಂಬಡಿ ತೂಕ ಆಕಳಕರಿ ಒಂದು ದಂಬಡಿ ತೂಕ ಮೋಡಿ, ಒಂದು ದಂಬಡಿ ತೂಕಾ ಅಜವಾನ ಒಂದು ದಂಬಡಿ ತೂಕ ಬುರುಸಾನಿ ಅಜವಾಣಿ, ಕಟಗರೋಣಿ ಇಷ್ಟೆಲ್ಲಾ ಅರೆದು

ಕಡಲಿಕಾಳಿನಷ್ಟು ಕಟ್ಟಿ ಎರಡು ಲವಂಗ ಎರಡು ಕರಿಬೇವಿನ ಸೊಪ್ಪು ಬೆಚ್ಚಗಮಾಡಿ ಅರೆದುಕೊಡಬೇಕು. ಜ್ವರದಿಂದ ಆಗ ತಾನೆ ಆರಾಮ ಆದವರಿಗೆ ಬಸಿದ ಅನ್ನದ ಗಂಜಿಗೆ ಅರಿಷಿಣ ತುಪ್ಪಹಾಕಿಕೊಡಬೇಕು.

**ಕುರು:** ವೀಳ್ಯಾದ ಎಲೆಯನ್ನು ದೀಪಕ್ಕೆ ಹಚ್ಚಿ ಕಾಯಿಸಿ ಅದನ್ನು ಕುರುವಿನ ಮೇಲೆ ಹಚ್ಚುವುದು. ಬೆಳ್ಳುಳ್ಳಿ ಸಣ್ಣ ಜಜ್ಜಿ ಅದಕ್ಕೆ ಅಂಟಿಸಿದರೆ ಅದು ಒಡೆದುಹೋಗುತ್ತದೆ. ಇಲ್ಲದಿದ್ದರೆ ಮುಳ್ಳುಕಾಯಿ ಒಳಗಿನ ಬೀಜ ಅರೆದು ಅದರ ಎಲಿ ಸ್ವಲ್ಪ ಕಾಯಿಸಿ ಹಚ್ಚಿದರೆ ಎರಡು ದಿವಸದಲ್ಲಿ ಆರಾಮವಾಗುತ್ತದೆ.

**ಸೊಂಟನೋವು:** ಅಮೃತ ಬಳ್ಳಿ ರಸ ತೆಗೆದು ಸೊಂಟಕ ಹಚ್ಚಿ ಸುಡು ಬಿಸಿಲನಾಗ ಮೈ ಆರಿಸಿಕೊಂಡರೆ ಒಂದು ವಾರದಲ್ಲಿ ಸಮಾಧಾನ ಸಿಗುತ್ತದೆ.

ಮೊಲೆಹುಣ್ಣು: ವೀಳ್ಯದೆಲೆಯನ್ನು ಬಿಲ್ಲೆಯಂತೆ ಕತ್ತರಿಸಿ ಅದಕ್ಕೆ ಕೊಬ್ರಿ ಎಣ್ಣೆ ಸವರಿ ದೀಪಕ್ಕೆ ಬಿಸಿ ಮಾಡಿ ಹಚ್ಚಿದರೆ ಸ್ತನದ ನೋವು ಕಡಿಮೆಯಾಗುತ್ತದೆ.

**ಗಂಡಸ್ತನ:** ಮಲಗ ಮೀನಿನ ಮೇಲೆ ಇರುವ ಲ್ವಾಳಿ ತೆಗೆದು ಒಂದು ವಾರ ಅದನ್ನು ಅವನಿಗೆ ನುಂಗಿಸಿದರ ಒಳ್ಳೆಯದು.

**ಮೊಲೆಹಾಲು ಹೆಚ್ಚಲು:** ಒಂದು ವಾರ ದಿನಾ ಮುಂಜಾನೆ ಸಂಜೆಗೆ ಬಾಳಿಮೀನ ತಿನಿಸಿದರೆ ತಾಯಿ ಮುಗುವಿಗೆ ಉಣಿಸುವಷ್ಟು ಹಾಲು ಬರುತ್ತದೆ. ಮೊದಲು ಹಾಲುಣಿಸುವಾಗ ವೀಳ್ಯಾದೆಲೆ ರಸವನ್ನು ಸವರಿದರೆ ಮಗುವಿಗೆ ಹಾಲುಣಿಸಿದಂತೆ ಹೆಚ್ಚಾಗುತ್ತವೆ ಎನ್ನುತ್ತಾರೆ.

**ಚೇಳ ಕಡಿತಕ್ಕೆ:** ಕರಿ ಇಸರಿ ಬೇರಿನ ಬಳ್ಳಿಯನ್ನು ಅಮವಾಸ್ಯೆ ದಿವಸ ಕಿತ್ತು ತರಬೇಕು. ಅದು ಇರುವಲ್ಲಿಗೆ ಮುಂಗುಸಿಯೂ ವಾಸವಾಗಿರುತ್ತದೆ. ಅದನ್ನು ಚೇಳು ಚುಚ್ಚಿದ ತಕ್ಷಣ ನಿಂಬೆ ಹಣ್ಣಿನ ರಸದಲ್ಲಿ ತೇಯ್ದು ಹಚ್ಚಿದರೆ ಕಡಿಮೆಯಾಗುತ್ತದೆ. ಇಲ್ಲದಿದ್ದರೆ ಚೇಳು ಚುಚ್ಚಿದ ಜಾಗಕ್ಕೆ ಯೂರಿಯಾ ಅಥವಾ ೧೭:೧೭ ಒಂದು ಉಂಡಿ ತಗೊಂಡು ಚುಚ್ಚಿದ ಜಾಗದ ಮ್ಯಾಲ ಇಟ್ಟರ ಐದು ನಿಮಿಷದಲ್ಲಿ ನೋವು ಕಡಿಮೆಯಾಗುತ್ತದೆ.

**ಕಿವಿನೋವು:** ಕಿವಿನೋವಿಗೆ ತಾಯಿ ಮೊಲೆಹಾಲು ಅಥವಾ ಬೆಕ್ಕಿನ ಗಂಜಲನ್ನು ಹಾಕಿದರೆ ತಕ್ಷಣ ಅದು ಮಾಯವಾಗುತ್ತದೆ.

**ಹಲ್ಲುನೋವು:** ಒಂದು ತುಂಡು ಕರಿಕಾಯಿ ಅದಕ್ಕೆ ಸ್ವಲ್ಪ ಉಪ್ಪು ಒಂದು ತುಂಡು ಲವಂಗ ಸೇರಿಸಿ ಬಾಯಿಯಲ್ಲಿ ಇಟ್ಟುಕೊಂಡರೆ ಸ್ವಲ್ಪ ಸಮಯದಲ್ಲಿ ನೋವು ವಾಸಿಯಾಗುತ್ತದೆ.

**ಗಂಟಲು ನೋವು:** ಒಲಿಯಲಿರುವ ಬಿಸಿ ಬಿಸಿ ಬೂದಿಯನ್ನು ಎರಡುದಿನ ಹಚ್ಚಿ ತಿಕ್ಕಿದರೆ ನೋವು ವಾಸಿಯಾಗುತ್ತದೆ.

**ಗಾಯಕ್ಕೆ:** ಗಾಯವಾದ ಸ್ಥಳದಲ್ಲೂ ಬದುಕಿನ ಬಳಿ ಅಥವಾ ತುಳಸಿಯನ್ನು ಅಂಗೈಯಲ್ಲಿ ಹಿಂಡಿ ಅದರ ರಸ ಹಚ್ಚಿದರೆ ಗಾಯ ಒಣಗುತ್ತದೆ.

**ಸುಟ್ಟಗಾಯ:** ಜೇನು ತುಪ್ಪ ಸವರುವುದು ಮತ್ತು ಒಣಗಿದ ನೆಲ್ಲಿಸೊಪ್ಪು ಮತ್ತು ಒಣಗಿದ ಹುಣಸೇ ಬೀಜದ ಪುಡಿಯನ್ನು ಕೊಬ್ರಿ ಎಣ್ಣೆಯೊಂದಿಗೆ ಕಲಸಿ ಹಚ್ಚಬೇಕು.

**ಶೀಘ್ರ ಪ್ರಸವ:** ಗರ್ಭಿಣಿಯರಿಗೆ ನೋವು ಕಾಣಿಸಿಕೊಂಡಾಗ ಬೇಗ ಪ್ರಸವವಾಗುವಂತೆ ಜೀರಗಿಯ ಪುಡಿಯನ್ನು ನೀರಿನಲ್ಲಿ ಕುದಿಸಿ, ಬೆಣ್ಣೆ ಹಾಕಿ ಕುಡಿಯಲು ಕೊಟ್ಟರೆ, ಇನ್ನು ಕೆಲವು ಕಡೆ ಕುಚಲಕ್ಕಿ ಗಂಜಿಯನ್ನು ಅಥವಾ ಶ್ಯಾವಿಗೆ ಗಂಜಿಗೆ ಬೆಣ್ಣೆಹಾಕಿ ಕೊಡಬೇಕೆನ್ನುವರು.

ಹೀಗೆ ಅವರು ತಮ್ಮದೇ ಆದ ಹಲವು ರೀತಿಯ ನಾಟೀ ವೈದ್ಯಕೀಯ ಪದ್ಧತಿಯನ್ನು ಬಳಸಿಕೊಂಡು ತಮ್ಮ ಜೀವನವನ್ನು ಸುಗಮವಾಗಿ ನಡೆಯಿಸಿಕೊಂಡು ಬರುತ್ತಾರೆ. ಅವರ ಜನಾಂಗದವರಲ್ಲಿ ಯಾರಿಗೂ ಏನಾದರೂ ಆದರೆ ಅಲ್ಲಿಯೇ ಅವರು ಚಿಕಿತ್ಸೆಯನ್ನು ಕೊಡುತ್ತಾರೆ. ಆದರೂ ಈಗ ಇವರು ನಗರಕ್ಕೆ ಪಕ್ಕದಲ್ಲಿರುವುದರಿಂದ ಸರಕಾರಿ ಆಸ್ಪತ್ರೆಯಲ್ಲಿ ಉಚಿತ ಸೇವೆ ಹಾಗೂ ಮಕ್ಕಳಿಗೆ ಅಂಗನವಾಡಿಯವರಿಂದ ಕೆಲವೊಂದು ಉಚಿತ ಸೇವೆಯು ಸಿಗುವುದರಿಂದ ತಮ್ಮ ನಾಟಿ ವೈದ್ಯಪದ್ಧತಿಯನ್ನು ಕಡಿಮೆಮಾಡಿದ್ದಾರೆ. ಹೆಚ್ಚಿನವರು ಸರಕಾರಿ ಆಸ್ಪತ್ರೆಯಲ್ಲಿ ಸೇವೆಯನ್ನು ಪಡೆಯುತ್ತಿದ್ದಾರೆ.

**ಮಾಟಮಂತ್ರ:** ಜನಪದರಲ್ಲಿ ಮಾಟಮಂತ್ರದ ಬಗ್ಗೆ ಬಹಳ ನಂಬಿಕೆ ಇದೆ. ಆರೋಗ್ಯ ಸರಿಯಿಲ್ಲದಿದ್ದಾಗ ದೇವರ ಮೊರೆ ಹೋಗುವುದು. ತಾಯಿತ ಬೇಡಿ ಕರಿದಾರ ಕಟ್ಟಿಕೊಳ್ಳುವುದು, ಜ್ವರ ಬಂದಾಗ ವಿಭೂತಿ, ಬೂದಿ ಹಚ್ಚಿಕೊಳ್ಳುವುದು ಹೀಗೆ ಹತ್ತು ಹಲವಾರು ರೀತಿಯ ನಂಬಿಕೆಗಳನ್ನಿಟ್ಟುಕೊಂಡು ಮೂಢನಂಬಿಕೆಗೆ ಮಾರು ಹೋಗುತಾರೆ. ಅದಲ್ಲದೆ ಹರಕೆ, ಕುರಿ, ಕೋಳಿ, ಬಲಿಕೊಡುವುದು, ನಿಂಬೆಕಾಯಿ ಮಂತ್ರಿಸಿಕೊಳ್ಳುವುದು ಇವು ಇವರಲ್ಲಿ ಸರಳವಾಗಿ ಕಣ್ಣಿಗೆ ಕಾಣುವ ದೃಶ್ಯಗಳು. ಈ ರೀತಿಯ ವಿಚಾರದಲ್ಲಿ ಬಹಳ ನಂಬಿಕೆ. ಅದರಲ್ಲಿಯೂ ಅವರು ಎರಡು ರೀತಿಯಾದ ಮಾಟವನ್ನು ಹೇಳುತ್ತಾರೆ. ಒಂದು ಒಳ್ಳೆಯದು ಇನ್ನೊಂದು ಕೆಟ್ಟದ್ದು ದೊಡ್ಡಮನಿ

ಮತ್ತು ಸಾಸನೀಕರವರ ಅಭಿಪ್ರಾಯದಂತೆ ಒಂದು ವಿನಾಶಾತ್ಮಕ ಮತ್ತೊಂದು ರಕ್ಷಣಾತ್ಮಕ ಮಾಟ ಉಂಟು.

**ವಿನಾಶಾತ್ಮಕ ಮಾಟ:** ಮಾಟಗಾರ ಕುಂಬಾರನ ಮನೆಯಿಂದ ಚಿಕ್ಕ ಮಡಿಕೆ ಅಥವಾ ಮಣ್ಣಿನ ಮುಚ್ಚಳ, ಅಕ್ಕಸಾಲಿಗ ಮನೆಯಿಂದ ಮೂರು ತಾಮ್ರದ ತಂತಿ, ಮೂರು ನಿಂಬೆ ಹಣ್ಣು, ಒಂಬತ್ತು ಕಲ್ಲು ಹರಳು, ಮೂರು ವಿಭೂತಿ, ಗಟ್ಟಿ ಇವೆಲ್ಲವನ್ನು ಹಾಕಿ ತಾಮ್ರದ ತಗಡಿನಲ್ಲಿ ಉದ್ದೇಶಿತ ವ್ಯಕ್ತಿಯ ಹೆಸರು ಬರೆದು, ತಾಯಿತದಂತೆ ಮಡಿಸಿ, ದಾರದಿಂದ ಸುತ್ತಿ ಮುಚ್ಚಳದಲ್ಲಿ ಮೂರು ದಾರಿಯ ಹುಡಿ ಮಣ್ಣು ತಂದು ಅದರಿಂದ ಅರಳಿನ ಗೊಂಬೆ ಮಾಡಿ ಅದನ್ನು ಮುಚ್ಚಳದಲ್ಲಿಟ್ಟು (ಮುಟ್ಟಿನ ಅರಿವೆಯ ಚಿಂದಿಯನ್ನು ಹರಿದುಹಾಕಿದರೆ ಈ ಮಾಟ ಯಶಸ್ವಿಯಾಗುವುದು ಮತ್ತು ಯಾವ ಶಕ್ತಿ ದೇವತೆಗಳು ಇದರ ಸಮೀಪ ಬರದೇ ಇದು ಫಲ ದೊರೆಯುವುದು) ಉದ್ದೇಶಿತ ವ್ಯಕ್ತಿಯ ಕೂದಲು ಅಥವಾ ಉಗುರು ಇಲ್ಲವೇ ಅವನುಟ್ಟ ಬಟ್ಟೆ ಅವನು ತುಳಿದ ಮಣ್ಣು ಇವೆಲ್ಲವನ್ನು ಹಾಕಿ ಅದನ್ನು ಗುರುವಾರ ಅಥವಾ ರವಿವಾರ ಅಮವಾಸ್ಯೆ ಬಂದಿದ್ದರೆ ಅದು ರಾತ್ರಿ ಉದ್ದೇಶಿತ ವ್ಯಕ್ತಿಯ ಮನೆಯಲ್ಲಿ ಹೂಳುವುದರಿಂದ ಆ ವ್ಯಕ್ತಿಯ ವಿನಾಶಕ್ಕೆ ಕಾರಣವಾಗುವುದೆಂದು ನಮಬುತ್ತಾರೆ.

**ಹಣವಂತ ವ್ಯಕ್ತಿಗೆ ಕೋಡು:** ಶ್ರೀಮಂತ ವ್ಯಕ್ತಿಗೆ ಮಾಟ ಮಾಡಿಸುವುದು. ಮೂರು ನಿಂಬೆಹಣ್ಣು, ಮೂರುಮೊಳೆ, ಹಂಚಿನ ಬಿಲ್ಲೆಯನ್ನು (ಮಡಿಕೆಚೂರು) ಆ ವ್ಯಕ್ತಿಯಿಂದ ಪಡೆದುಕೊಂಡ ಹಣ ಎಲ್ಲವನ್ನು ಹೊಸ ಬಟ್ಟೆಯಲ್ಲಿ ಸೇರಿಸಿ ಗಂಟುಕಟ್ಟಿ ಹೊಳೆ ಹಳ್ಳಗಳಲ್ಲಿ ತೇಲಿ ಬಿಡುವರು. ಇದರಿಂದ ಅವನ ಸಂಪತ್ತು ನೀರು ಹರಿದಂತೆ ಹರಿದು ಹೋಗಿ ಬಡತನ ಬರುವುದು ಎನ್ನುತ್ತಾರೆ.

ಮನೆಗೆ ಕೇಡಾಗುವಂತೆ ಮಾಡುವುದು; ಅಮವಾಸೆಯ ದಿವಸ ಟಗರು ಕಡಿದು ಅಥವಾ ಆಡುಕುರಿಗಳ ಮರಿಯನ್ನು ಕಡಿದು ಅವುಗಳ ಹಿಂಗಾಲನ್ನು ತಂದು ಅದಕ್ಕೆ ಮಾಟಗಾರನಿಂದ ಮೊಳೆ ನಿಂಬೆ ಹಣ್ಣುಗಳನ್ನು ಉದ್ದೇಶಿತ ವ್ಯಕ್ತಿಯ ಮನೆಯ ಕಿಂಡಿಯ ಮೇಲೆ ಇಡುವರು. ಇದರಿಂದ ಮನೆತನದಲ್ಲಿ ಜಗಳ ಪ್ರಾರಂಭವಾಗಿ ಶಾಂತಿ ಹಾಳಾಗುವುದು. ಮನೆತನದ ಒಗ್ಗಟ್ಟು ಹಾಳಾಗುವುದು. ಇದರಿಂದ ಆ ಮನೆಯ ಏಳ್ಗೆ ಕುಂಠಿತವಾಗುವುದು ಎಂದು ಹೇಳುತ್ತಾರೆ.

**ಬೆಳೆಗೆ ಕೋಡು:**

ಚೆನ್ನಾಗಿ ಬೆಳೆ ಬೆಳೆಯುವವನ ಮೇಲೆ ಸೇಡು ತೀರಿಸಿಕೊಳ್ಳಲು ಅವನ ಜಮೀನಿನಲ್ಲಿ ಒಡೆದ ಮಡಿಕೆಯಲ್ಲಿ ಮೂರು ದಿನಸಿಯ ಧಾನ್ಯವನ್ನು ನಿಂಬೆಹಣ್ಣು

ಮೊಳೆ ಮತ್ತು ಕುಂಕುಮ ವಿಭೂತಿ ಗಟ್ಟಿ, ಎಕ್ಕದ ಬೇರು ಹಾಕಿ ಹೊಲದ ಒಂದು ಮೂಲೆಯಲ್ಲಿ ಅಥವಾ ಬದುವಿನಲ್ಲಿ ಹೂಳುವರು. ಹೀಗೆ ಮಾಡುವುದರಿಂದ ಬೆಳೆಯು ಚೆನ್ನಾಗಿ ಬರದೆ ಹಾಳಾಗಿ ಹೋಗುತ್ತದೆ ಎನ್ನುತ್ತಾರೆ. ಹೊಲವನ್ನು ಖರೀದಿಗೆ ಪಡೆಯುವ ಆಸೆಯಿದ್ದರೆ ಉದ್ದೇಶಿತ ವ್ಯಕ್ತಿಯ ಹೆಸರಲ್ಲಿ ತಗಡನ್ನು ಬರೆಯಿಸಿ ಹೂಳುವುದರಿಂದ ಆ ಹೊಲವನ್ನು ತಾನೇ ಮಾರಲು ಬರುತ್ತಾನೆ ಎಂಬ ನಂಬಿಕೆ ಇವರಲ್ಲಿದೆ.

**ವ್ಯಕ್ತಿಗೆ ಸಾವು:** ಸತ್ತ ಬೆಕ್ಕಿನ ತಲೆಬುರುಡೆಯನ್ನು ತಂದು ಹೊಸ ಮಡಿಕೆಯಲ್ಲಿ ಹಾಕಿ ಅದರಲ್ಲಿ ಮೂರು ನಿಂಬೆಹಣ್ಣು ಮೂರು ಮೊಳ ಮೂರು ದಿನಸಿಕಾಳು ಹಾಕಿ, ಅದನ್ನು ಉದ್ದೇಶಿತ ವ್ಯಕ್ತಿಯ ಮನೆಯ ಬಳಿಯಲ್ಲಿ ಅಥವಾ ಅವನು ಓಡಾಡುವ ಜಾಗದಲ್ಲಿ ದಾಟುವಂತೆ ಹೂಳುವರು. ಈ ರೀತಿ ಮಾಡುವುದರಿಂದ ಆ ವ್ಯಕ್ತಿಯ ಎಂಟ್ಹತ್ತು ದಿವಸದಲ್ಲಿ ಸಾಯುವನು ಎಂದು ಹೇಳುವ ಮೌಢ್ಯತೆ ಅದರಲ್ಲಿದೆ.

**ರಕ್ಷಣಾತ್ಮಕ ಮಾಟ:** ಕೆಲವು ಜನರ ದೃಷ್ಟಿ ಬಹಳ ಕೆಟ್ಟದ್ದಾಗಿರುತ್ತದೆ. ಎಳೆಯ ಮಕ್ಕಳ ಮೇಲೆ ಬಸುರಿಯರ ಮೇಲೆ, ಬಾಣಂತಿಯ ಮೇಲೆ ಅಂಥವರ ದೃಷ್ಟಿ ಬಿದ್ದರೆ ಅವರಿಗೆ ತಲೆನೋವು ಬರುವುದು, ಹೊಟ್ಟೆನೋವು ಬರುವುದು, ಅಲ್ಲದೆ ಹಾಲು ಕೊಡುವ ದನಗಳು ಹಾಲು ಕೊಡದೇ ಒದೆಯಲು ಪ್ರಾರಂಭಿಸುತ್ತವೆ ಅಥವಾ ರಕ್ತದಂತಹ ಹಾಲು ಕೊಡುತ್ತವೆ. ಇದಕ್ಕೆ ದೃಷ್ಟಿ ಮಣೆಯನ್ನು ಅಥವಾ ಹಂಚಿನ ಬಿಲ್ಲಿ ಅಥವಾ ಚಿಪ್ಪು ಕಸಬರಿಕೆ ಹುಲ್ಲು, ಕೇರಳ್ಳು ಕಟ್ಟುವರು. ಇದರಿಂದ ದೃಷ್ಟಿ ದೋಷ ಕಡಿಮೆಯಾಗುವುದು ಎಂದು ಹೇಳುವರು.

**ದೃಷ್ಟಿದೋಷದ ಪರಿಹಾರ ಇನ್ನೊಂದು ವಿಧಾನ:** ದೃಷ್ಟಿದೋಷವಾದ ಮಗುವನ್ನು ತಾಯಿ ಎತ್ತಿಕೊಂಡು ಪೂರ್ವಾಭಿಮುಖವಾಗಿ ಅಂಗಳದಲ್ಲಿ ಕೂರುತ್ತಾಳೆ. ಇನ್ನೊಬ್ಬಳು ಮೂರು ಕಣ್ಣಿನ ತೆಂಗಿನ ಚಿಪ್ಪು ಮತ್ತು ಕಳ್ಳಿ ಎರಡನ್ನೂ ತಂದು ಮಗುವಿಗೆ ಮೂರು ಸಲ ಇಳಿದೆಗೆದು ತೆಗೆದು ಅದನ್ನು ಕೆಂಡದಲ್ಲಿ ಸುಟ್ಟು ಆ ಬೂದಿಯನ್ನು ನೀರಲ್ಲಿ ಹಾಕಿ ಅದರಲ್ಲಿ ಅರಿಷಿಣ, ಸುಣ್ಣ ಹಾಕಿ ದಾರಿಯಲ್ಲಿ ಚಲ್ಲುವರು. ಇದರಿಂದ ದೃಷ್ಟಿ ದೋಷ ಪರಿಹಾರವಾಗುತ್ತದೆ ಎನ್ನುತ್ತಾರೆ.

**ಕೂಸು ಅಳುತ್ತಿದ್ದರೆ:** ಕೂಸು ನಿರಂತರವಾಗಿ ಅಳುತ್ತಿದ್ದರೆ ಮೊಲೆ ಉಣ್ಣದಿದ್ದರೆ, ಕಣ್ಣಾಸ್ರೆ ಆಗಿದೆ ಎಂದು ಹಿರಿಯರು ಇಲ್ಲವೇ ತಾಯಿ ಎಡಗೈಯಿಂದ ತನ್ನ ಕೂದಲುಗಳನ್ನಾಗಲಿ, ಸೆರಗಿನ ತುದಿಯನ್ನಾಗಲಿ ಹಿಡಿದು ಕೂಸಿಗೆ ಇಳಿದೆಗೆದು 'ತೂ' ಎಂದು ಮೂರು ಬಾರಿ ಉಗಿಯುವರು. ಕೆಲವರು ಉಪ್ಪು, ಮೆಣಸಿನಕಾಯಿ, ಕಸಬರಿಕೆಯ ಕಡ್ಡಿ ಸೇರಿಸಿ

ಎಡಗೈಯಿಂದ ಹಿಡಿದು ಮೂರು ಸಾರಿ ಕೂಸಿಗೆ ಇಳಿದೆಗೆದು ಉರಿಯುವ ಒಲೆಗೆ ಹಾಕುವರು. ಇನ್ನೂ ಕೆಲವರು ಕೂಸಿಗೆ ದೃಷ್ಟಿ ತಾಗದಿರಲೆಂದು ಪ್ರತಿದಿನ ಮುಂಜಾನೆ, ಸಂಜೆ ಕಪ್ಪು, ಕೆಂಪು ಓಕುಳಿ ಮಾಡುವರು ಮತ್ತೆ ಎಡಗೈ ಮತ್ತು ಎಡಗಾಲಲ್ಲಿ ಕರಿಯ ಉಣ್ಣೆ ಕಟ್ಟುವರು. ಸರ್ವದೋಷ ಪರಿಹಾರಕ್ಕಾಗಿ ಈ ರೀತಿಯ ವಿಧಾನವನ್ನು ಅಳವಡಿಸಿಕೊಂಡಿದ್ದೇವೆ ಎನ್ನುತ್ತಾರೆ.

ಕೊನೆಯದಾಗಿ ಹರಕೆ ಹೊತ್ತು ಮನೆಯ ದೇವರು, ಕುಲದೇವರಾದ ಶ್ರೀರಾಮನನ್ನು ನೆನೆಸುವರು ಅವರು ರಾಮನಾಮ ಜಪಿಸುತ್ತಾ ಭಜನೆ ಪೂಜೆಗಳನ್ನು ಮಾಡಿ ಹರಕೆ ತೀರಿಸುತ್ತಾರೆ. ಅವರ ಹರಕೆಗಳನ್ನು ತೀರಿಸಲು ಒಂದು ವರ್ಷ ಅಥವಾ ಎರಡು ವರ್ಷಕ್ಕೊಮ್ಮೆ ಪಂಡರಾಪುರ ವಿಠಲನ ದೇವಸ್ಥಾನಕ್ಕೆ ಹೋಗಿ ತಮ್ಮೆಲ್ಲಾ ಹರಕೆಗಳನ್ನು ತೀರಿಸಿ ನಮಸ್ಕರಿಸಿ ಬರುವರು. ಹಾಗೆ ಮನೆಯ ದೇವರು ಊರು ದೇವರಿಂದ ಕಾಳೀರಮ್ಮ ಮತ್ತು ಹುಲಿಗೆಮ್ಮ ದೇವತೆಗಳಿಗೆ ಕುರಿ-ಕೋಳಿ ಬಲಿಯನ್ನು ಕೊಟ್ಟು ತಾಯಿ ನಮ್ಮನ್ನು ತಣ್ಣಗಿರಿಸು ಮಕ್ಕಳು ಮರಿಯನ್ನು ಚೆನ್ನಾಗಿಡು ಎಂದು ತಾಯಿಯ ಎದುರಿಗೆ ಸಾಷ್ಟಾಂಗ ನಮಸ್ಕಾರ ಹಾಕಿ ತಮಗೆ ಹಿಡಿದ ಎಲ್ಲಾ ಭೂತ-ಪಿಶಾಚಿಗಳನ್ನು ಹೊಡೆದೋಡಿಸಿಕೊಂಡು ಸಂತೋಷವಾಗಿ ಮನೆಗೆ ಬರುವರು.

ಹೀಗೆ ಈ ಜನ ತಮ್ಮನ್ನು ಸುಖವಾಗಿಡುವ ದೇವರುಗಳನ್ನು ಮತ್ತು ತಮ್ಮ ಕಸಬುಗಳನ್ನು ಪೂಜಿಸುತ್ತಾ ಹಿಂದಿನ ಎಲ್ಲ ಸಂಪ್ರದಾಯ, ರೂಢಿ, ಮೌಢ್ಯತನ ಎಲ್ಲವು ಹೊತ್ತಿಕೊಂಡು ಇಂದಿಗೂ ಅಂದಿನ ಅದೇ ಅಲೆಮಾರು, ಗುಡ್ಡಗಾಡಿನ ಜೀವನವನ್ನು ಮುಂದುವರಿದ ರಾಜ್ಯದಲ್ಲಿ ಬದುಕುತ್ತಿದ್ದಾರೆ.

**ಶಿಳ್ಳೇಕ್ಯಾತ ಜನಾಂಗದ ನಂಬಿಕೆಗಳು:** ಈ ಜನಾಂಗಕ್ಕೆ ನಂಬಿಕೆಯೇ ದೇವರು ನಂಬಿಕೆಯೇ ಇವರ ಜೀವನ. ನಂಬಿಕೆಯನ್ನೇ ಅವಲಂಬಿಸಿ ಜೀವನ ನಡೆಸುವಂತಹ ಈ ಜನಾಂಗ ವಿದ್ಯಾವಂತರು ಮತ್ತು ಅವಿದ್ಯಾವಂತರು ತಮ್ಮ ತಂದೆ-ತಾಯಿ, ತಾತ-ಮುತ್ತಾತ ಹಾಕಿಕೊಟ್ಟ ಹಾದಿಯ ಮೇಲೆ ನಡೆಯುವಂತಹವರು ಅವರು ಹೇಳಿದ ಮಾತನ್ನೇ ಇವರು ಇವತ್ತಿಗೂ ನಂಬಿಕೊಂಡು ತಮ್ಮ ಮೂಲ ಕುಲಕಸುಬನ್ನೇ ಇಂದಿಗೂ ಮುಂದುವರಿಸಿಕೊಂಡು ಅದರಿಂದ ಬಂದಂತಹ ಆಹಾರದ ಮೇಲೆ ಇಡೀ ಕುಟುಂಬ ಅವಲಂಬಿತವಾಗಿರುತ್ತದೆ. ಒಟ್ಟಾರೆ ನಂಬಿಕೆ ಎಂದರೆ ಅವರಿಗೆ ತಾಯಿಸಮಾನ. ಅವರ ನಂಬಿಕೆಗಳನ್ನು ಪಟ್ಟಿ ಮಾಡುತ್ತಾ ಹೋದರೆ ನೂರಾರು ಆದರೆ ಕೆಲವೊಂದು ಮಾತ್ರ ಇಲ್ಲಿ ನೋಡುತ್ತಾ ಹೋಗೋಣ.

೧) ಒಳ್ಳೆಯ ಕೆಲಸಕ್ಕೆ ಹೋಗುವಾಗ ಖಾಲಿ ಕೊಡ (ಬಿಂದಿಗೆ) ತೆಗೆದುಕೊಂಡು ಬಂದರೆ ಅಪಶಕುನ.

೨) ಒಳ್ಳೆಯ ಮಾತುಗಳನ್ನು ಆಡುವಾಗ ಸೀನಿದರೆ ಅಪಶಕುನ

೩) ಒಳ್ಳೆಯ ಕೆಲಸಕ್ಕೆ ಹೋಗುವ ಮುನ್ನ ಕ್ಷೌರಿಕನ ಮುಖ ನೋಡಬಾರದು.

೪) ಬಾಗಿಲಲ್ಲಿ ನಿಂತು ಸೀನಬಾರದು

೫) ಅಂಗಳದಲ್ಲಿ ಚಾಣ ಹಕ್ಕಿ ನುಡಿಯಬಾರುದು

೬) ಮನೆಯೊಳಗೆ ಬಳವ ಬರಬಾರದು, ರಾತ್ರಿ ಗೂಬೆ ಬರಬಾರದು

೭) ಅವರು ಊರಿಂದೂರಿಗೆ ಗುಳೆ ಹೋಗುವಾಗ ಕಟ್ಟಿಗೆ ಹೊರೆ ಬರಬಾರದು

೮) ಹೊರಗಡೆ ಹೋಗುವಾಗ ಎಡಗಡೆಯಿಂದ ಬೆಕ್ಕು ಅಡ್ಡ ಬರಬಾರದು

೯) ನದಿ ದಾಟುವಾಗ ಹೆಣ್ಣು ಮುಟ್ಟಾಗಬಾರದು.

೧೦) ದೇವರಿಗೆ ತೆಂಗಿನಕಾಯಿ ಒಡೆದಾಗ ಮೂರಗಾಯಿ ಆಗಬಾರದು

೧೧) ಮುಂಜಾನೆ ಎದ್ದ ತಕ್ಷಣ ಕುಂಕುಮ ಇಲ್ಲದ ಹೆಣ್ಣನ್ನು ನೋಡಬಾರದು

೧೨) ನಾಯಿ ಅಳಬಾರದು

೧೩) ಕನಸಲ್ಲಿ ಬೆಂಕಿ, ಕಟ್ಟಿಗೆ ಮತ್ತು ಮಾಂಸ ನೋಡಬಾರದು

೧೪) ಕನಸಲ್ಲಿ ನಗಬಾರದು

೧೫) ಕನಸಿನಲ್ಲಿ ಬಂಗಾರ ಸಿಗಬಾರದು

೧೬) ಕನಸಿನಲ್ಲಿ ನರಳಬಾರದು

೧೭) ಗಂಡಸರಿಗೆ ಎಡಗಣ್ಣು, ಹೆಂಗಸಿಗೆ ಬಲಗಣ್ಣು ಹಾರಬಾರದು, ಇವುಗಳೆಲ್ಲವು ಜೀವನದಲ್ಲಿ ಅಚಾನಕ ಆಗುವಂತಹವು ಇವುಗಳನ್ನು ಯಾರು ಮಾಡಲೇಬೇಕೆಂದು ನೋಡಬೇಕಂತಲೇ ಆಗುವುದಿಲ್ಲ, ಒಬ್ಬ ಹೆಣ್ಣು ಮಗಳು ನೀರು ಬೇಕಾದಾಗ ಸಹಜವಾಗಿ ಅವಳು ಬರುತ್ತಿರಬೇಕಾದರೆ ಇವರಿಗೇನು? ಅವಳ ಕಷ್ಟವನ್ನು ಅವಳು ನೀಗಿಸಿಕೊಳ್ಳಲು ಬಂದರೆ ಅದು ಇವರಿಗೆ ಆಗುವ ಕೆಲಸ ಆಗುವುದಿಲ್ಲ ಎಂಬ ನಂಬಿಕೆಯನ್ನು ಹೊತ್ತಿಕೊಂಡು ಬಂದಂತಹವರು, ಹೀಗೆ ಈ ಮೇಲಿನ ಪಟ್ಟಿಯಲ್ಲಿರುವ ನಂಬಿಕೆಗಳಿಂದ ಜೀವನದಲ್ಲಿ

ಕೆಡಕುಗಳನ್ನುಂಟುಮಾಡುತ್ತದೆ ಹೊರತು ಒಳ್ಳೆಯದಾಗುವುದಿಲ್ಲ ಎಂಬ ನಂಬಿಕೆ ಇವರದ್ದು. ಇನ್ನು ಇವುಗಳಿಗೆ ವಿರುದ್ಧವಾಗಿ

೧೮) ತುಂಬಿದ ಕೊಡ ಹೊತ್ತುಕೊಂಡು ಮುತ್ತೈದೆ ಬಂದರೆ ಒಳ್ಳೆಯದು

೧೯) ಹುಡುಗಿಯನ್ನು ನೋಡಲು ಹೋದಾಗ ಹುಡುಗಿ ದೇವರ ಪೂಜೆ ಮಾಡುತ್ತಿದ್ದರೆ ಶುಭ ಶಕುನ.

೨೦) ಎದ್ದಾಗ ದ್ರುವ ನಕ್ಷತ್ರ ನೋಡಿದರೆ ಆನಂದ

೨೧) ಕನಸಿನಲ್ಲಿ ಸತ್ತರೆ, ಅತ್ತರೆ ಉತ್ತಮ

೨೨) ಮುಂಗುಸಿ ಮತ್ತು ನರಿ ಮುಖ ಮೂರುಬಾರಿ ನೋಡಿದರೆ ಉತ್ತಮ

೨೩) ಗಂಗಳಾದಾಗ ನೊಣ ಬಿದ್ರ ಬ್ಯಾಟಿ ಗ್ಯಾರಂಟಿ

೨೪) ರಾತ್ರಿ ಹೊತ್ತು ಮೀನ ಹಿಡಿಯಲು ಹೋದಾಗ ಚುಕ್ಕೆ ಬಿದ್ರೆ ಉತ್ತಮ, ಹಾಗೆ ಮೋಡಕವಿದು ನಾಲ್ಕ ಹನಿ ಉದುರಿದರೆ ಇನ್ನೂ ಉತ್ತಮ.

೨೫) ಮನೆ ಹೊರಗಡೆ ಹೋಗಬೇಕಾದರೆ ದೇವರ ದೀಪ ನೋಡಿ ಹೋದ್ರೆ ಒಳ್ಳೆಯದು

ಹೀಗೆ ದಿನನಿತ್ಯದ ಜೀವನದಲ್ಲಿ ಸಹಜವಾಗಿ ಆಗುವ ಪ್ರತಿಯೊಂದರ ಹಿಂದೆ ಒಂದೊಂದು ಕಥೆಗಳನ್ನು ಕಟ್ಟಿಕೊಂಡು ಅದರ ಸಲುವಾಗಿ ಇಡೀ ದಿನದ ಜೀವನ-ವನ್ನು ಅನಾವಶ್ಯಕವಾಗಿ ಕಳೆಯುತ್ತಿರುತ್ತಾರೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಇವರು ದುಡಿಮೆಗಿಂತ ನಂಬಿಕೆಯನ್ನು ನಂಬಿ ಜೀವನ ಮಾಡುವಂತಹವರು ಎಂದರೆ ತಪ್ಪಾಗಲಿಕ್ಕಿಲ್ಲ. ಯಾವುದೇ ಒಳ್ಳೆಯದಿರಲಿ ಅಥವಾ ಕೆಟ್ಟದಿರಲಿ ಅವರು ನಂಬಿಕೆ, ರೂಢಿ, ಸಂಪ್ರದಾಯ ಇವುಗಳಾದಾರದ ಮೇಲೆ ಅವರ ಜೀವನದ ಪ್ರತಿಯೊಂದು ಕಾರ್ಯ ಮುಂದುವರಿಸುತ್ತಾರೆ. ಈ ಮೂರು ಇವರಿಗೆ ಒಂದು ರೀತಿಯಾಗಿ 'ಅಫೀಮು' ಇದ್ದ ಹಾಗೆ.

ಆದರೆ ಮನೆಯಲ್ಲಿರುವವರಿಗೂ ಮತ್ತು ಪರಊರಿಗೆ ಹೋದರೂ ಅವರು ಹೆಣ್ಣನ್ನು ಅತ್ಯಂತ ಪ್ರೀತಿಯಿಂದ ಮತ್ತು ಗೌರವದಿಂದ ನೋಡುತ್ತಾರೆ. ಮಾತೃಪ್ರಧಾನ ಕುಟುಂಬವನ್ನು ಮುಂದುವರಿಸಿಕೊಂಡು ಬಂದ ಈ ಜನಾಂಗ ಇವತ್ತಿಗೂ 'ಹೆಣ್ಣಿಗೆ ಅತ್ಯಂತ ಪೂಜ್ಯನೀಯ ಭಾವನೆಯಿಂದ ನೋಡುತ್ತಾರೆ. ಹೆಣ್ಣುಮಕ್ಕಳಿದ್ದರೆ ಮದುವೆ ಆಗುವವರೆಗೂ ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಅವಳು ದೊಡ್ಡವಳಾದ ತಕ್ಷಣ

ಮದುವೆ ಮಾಡಿಕೊಡುವ ಸಂಪ್ರದಾಯ ಇನ್ನೂ ಅವರು ರೂಢಿಯಲ್ಲಿಟ್ಟು-ಕೊಂಡಿದ್ದಾರೆ. ವಯಸ್ಸಾದ ತಂದೆಯನ್ನು ಆದಷ್ಟು ಗೌರವ ಭಾವನೆಯಿಂದ ನೋಡಿಕೊಂಡು ಬರುತ್ತಿರುವ ಈ ಜನಾಂಗ ಬಿಟ್ಟು ಯುವಕರು ಮನೆಯಲ್ಲಿಯೇ ಹೊಟ್ಟೆಪಾಡಿಗಾಗಿ ಊರೂರು ಅಲೆಯುತ್ತಾರೆ.

# ಅಧ್ಯಾಯ ನಾಲ್ಕು
# ಅಲೆಮಾರಿಗಳ ಆರ್ಥಿಕ ಜೀವನ

ಒಬ್ಬ ವ್ಯಕ್ತಿಯ ಹುಟ್ಟಿನಿಂದ ಸಾಯುವವರಿಗೂ ಹಣ ಬೇಕು, ಹಣ ಇಲ್ಲದಿದ್ದರೆ ಈ ಪ್ರಪಂಚದಲ್ಲಿ ಇದ್ದು ಸತ್ತ ಹಾಗೆ. ಮನುಷ್ಯನ ದಿನ ನಿತ್ಯದ ಜೀವನಕ್ಕಾಗಿ ಒಂದಿಲ್ಲ ಒಂದು ರೀತಿಯಾಗಿ ಹಣದ ಅವಶ್ಯಕತೆ ಇಂದಿನ ಯುಗದಲ್ಲಿದೆ. ಒಂದು ಕಾಲವಿತ್ತು. ಆ ಕಾಲದಲ್ಲಿ ವ್ಯಕ್ತಿಗಳಿಗೆ ಬೇಕಾಗಿದ್ದುದು ಆಹಾರ, ಗಾಳಿ, ನೀರು ಮತ್ತು ಮೂಲಭೂತ ಸೌಕರ್ಯ. ಮನುಷ್ಯ ಯಾಂತ್ರಿಕವಾಗಿ ಬೆಳೆಯುತ್ತಾ ಹೋಗುತ್ತಿದ್ದರು ಅವನು ತನ್ನತನ ಎನ್ನುವುದನ್ನು ಮರೆತು ಹಣದ ಹಿಂದೆ ಬಿದ್ದಿದ್ದಾನೆ. ಇಂದು ದುಡ್ಡಿದ್ದವನೇ ದೊಡ್ಡಪ್ಪ. ಪ್ರತಿಯೊಬ್ಬರ ಮೇಲೆ ದುಡ್ಡಿನ ಮೇಲೆ ವ್ಯಕ್ತಿಯನ್ನು ಮತ್ತು ಅವನ ವ್ಯಕ್ತಿತ್ವವನ್ನು ಅಳೆಯುತ್ತಿದ್ದಾರೆ. ಇಂದು ಆಸ್ತಿ–ಅಂತಸ್ತು ಹಣವಿಲ್ಲದಿದ್ದರೆ ಎಷ್ಟೇ ಬುದ್ಧಿವಂತನಿರಲಿ ಅವನು ಈ ಪ್ರಪಂಚದಲ್ಲಿ ಅವನ ಸಮಯ ಬರುವವರಿಗೂ ಅವನೊಬ್ಬ ಕಾಲಕಸ. ಇಂದು ವ್ಯಕ್ತಿ ಮತ್ತು ಸಮಾಜ ಎರಡೂ ಹಣದ ಕೈಗೊಂಬೆ. ಒಬ್ಬ ವ್ಯಕ್ತಿ ಉನ್ನತವಾದ ಅಂತಸ್ತನ್ನು ಗಳಿಸುವುದಾಗಲಿ ಅಥವಾ ಒಂದು ಸಮಾಜ ರಾಜಕೀಯ ಪುಟದಲ್ಲಿ ಕಾಣುವುದಾಗಲಿ ಅದು ಹಣದ ಒಂದು ಪ್ರಾಬಲ್ಯದಿಂದ.

ಆ ಹಣವನ್ನು ಸಂಪಾದಿಸುವುದಕ್ಕಾಗಿ ಇಂದು ವ್ಯಕ್ತಿ ತನ್ನ ಸರ್ವ ಸಂಬಂಧವನ್ನು ಕಳೆದುಕೊಂಡು ಹಣದ ಹಿಂದೆ ಹೆಣದಂತೆ ಬಿದ್ದಿದ್ದಾನೆ. ಇಲ್ಲಿ ಯಾವುದೇ ರೀತಿಯ ಪ್ರೀತಿ ಪ್ರೇಮ ಸಂಬಂಧಗಳಿಗೆ ಬೆಲೆಯಿಲ್ಲದಂತಾಗಿದೆ. ನಾನು ನನ್ನವರು ಎನ್ನುವ ಮಮತೆ ಕಳೆದು ಹೋಗಿದೆ. ವ್ಯಕ್ತಿಯ ಮುಖದಲ್ಲಿ ಕೇವಲ ಆಡಂಬರಿಕೆಯ ನಗು, ನಗುವಿನಲ್ಲಿಯೂ ಜಿಪುಣತನ. ಹೀಗಾಗಿ ಇಂದಿನ ಸಮಾಜದಲ್ಲಿ ಬಹುಮುಖ್ಯ ಪಾತ್ರವನ್ನು ಹಣ ವಹಿಸುತ್ತಿದೆ.

ಭಾರತದಂತಹ ಬೃಹತ್ ರಾಷ್ಟ್ರದಲ್ಲಿ ಅದರಲ್ಲಿ ಬಹು ಜನಸಂಖ್ಯೆ ಜನಬೀಡಾದಂತಹ ಇಂತಹ ದೇಶದಲ್ಲಿ ಬದುಕುವುದು ತುಂಬಾ ಕಷ್ಟ ವಿದ್ಯಾವಂತ ಮತ್ತು ಬುದ್ಧಿವಂತನಾದವರು ಅದರಲ್ಲಿಯೂ ವೃತ್ತಿಯಿಂದ ಉತ್ತಮರಿರುವರು ಬದುಕಬಹುದು. ಆದರೆ ಬಹುಸಂಸ್ಕೃತಿಯ ಹಲವು ಜಾತಿಗಳ ನಾಡಾಗಿದ್ದು, ಈ ದೇಶದಲ್ಲಿ ಇವರು ಹಿಂದಿನ ಕಾಲದಿಂದಲೂ ಪರಂಪರಾನುಗತವಾಗಿ ಬಂದಂತಹ ವೃತ್ತಿ, ಕಸಬುಗಳನ್ನು ಇಂದಿಗೂ ಅವರು ಮುಂದುವರಿಸಿಕೊಂಡು ಬಂದಿದ್ದಾರೆ ಅದನ್ನು ಅವರು ಬಿಡಲು ಸಾಧ್ಯವಿಲ್ಲ, ಕಾರಣ ಅವರ ಧರ್ಮ ಅದಕ್ಕೆ ಅನುಮತಿ ಕೊಡುವುದಿಲ್ಲ.

ಹೀಗಾಗಿ ಅವರು ಅದನ್ನು ಬಿಟ್ಟು ಬೇರೆ ಕಸುಬನ್ನು ಆರಿಸಿಕೊಳ್ಳುವುದಿಲ್ಲ ಆದಾಯ ಅದರಲ್ಲಿ ತುಂಬಾ ಇಲ್ಲ ಉಪಜೀವನಕ್ಕಾಗುವಷ್ಟಾದರೂ ಬಂದರೆ ಉತ್ತಮ ಆದರೆ ಅದು ಬರದಿದ್ದಾಗ ಯಾವ ಸಂಪ್ರದಾಯ, ಯಾವ ಜಾತಿ, ಯಾವ ಧರ್ಮ ತಾನೇ ಸಾಯುವಾಗ ತನ್ನ ಜಾತಿ, ಧರ್ಮ ತೆಗೆದುಕೊಂಡು ಏನು ಮಾಡುತ್ತದೆ. ಒಂದು ರೀತಿ ಈ ಮಾತು ಸರಿ ಆದರೆ ಜನ ತಾನೂ ಸತ್ತರೂ ಸರಿ ನಾನು ಇದನ್ನೇ ಮಾಡಬೇಕು, ಹೀಗೆ ಬದುಕಬೇಕು, ನಾನು ಹುಟ್ಟಿದ್ದೆ ಇದಕ್ಕೆ ಆ ದೇವರು ನನ್ನನ್ನು ನನ್ನ ಧರ್ಮದವರನ್ನು ಇದಕ್ಕಾಗಿ ನಮ್ಮನ್ನು ಹುಟ್ಟಿಸಿದ್ದಾನೆ ಎನ್ನುವ ಗಾಢವಾದ ಕಲ್ಪನೆ ಕೆಲವು ಜನಂಗದವರಲ್ಲಿದೆ. ಹೀಗಾಗಿ ಇಂದು ಅಂತಹ ಜನಾಂಗ ಒಂದಾನ್ನೊಂದು ಕಾಲದಲ್ಲಿ ದೇಶದ ಉನ್ನತಿಗಾಗಿ, ಏಳ್ಗೆಗಾಗಿ ಜನರ ಉತ್ತಮ ಭವಿಷ್ಯಕ್ಕಾಗಿ ತಮ್ಮ ಜೀವವನ್ನು ತ್ಯಾಗ ಮಾಡಿದಂತಹವರು ಇಂದು ಬೀದಿ ಬೀದಿ ಭಿಕ್ಷಾಟನೆ ಮಾಡುತ್ತಾ ಅರೆನಗ್ನರಾಗಿ ಅರೆಹೊಟ್ಟೆಯಿಂದ ಜೀವನ ನಡೆಸುತ್ತಿದ್ದಾರೆ. ಇಂದು ಅವರ ಕಲೆ ನೆಲೆಯಿಲ್ಲದೆ ಯಾವುದೋ ಒಂದು ಮೂಲೆಯಲ್ಲಿ ಧೂಳು ಹಿಡಿದು ಯಾರು ಕೇಳದ ನೋಡದ ಅಂಗವಿಕಲವಾಗಿ ಕುಳಿತಿದೆ. ಅಂತಹ ಜನಾಂಗ ಮುಂದುವರಿದು ತಮ್ಮ ಕಲೆಗೆ ಬೆಲೆ ಬರುವಂತೆ ಮಾಡಬೆಕು. ಇದನ್ನು ಜಗತ್ತಿನ ಮೂಲೆ ಮೂಲೆಗೆ ಕರೆದೊಯ್ಯಬೇಕು ಎಂದರೆ ಅವರಿಗೆ ಹಣಬೇಕು. ಹೀಗಾಗಿ ಅವರಿಗೆ ಹಣದ ಸಹಾಯಬೇಕು. ಇಂದಿನ ಯಾಂತ್ರಿಕ ಯುಗದಲ್ಲಿ ಸಾಕಷ್ಟು ಚಲನಚಿತ್ರಗಳು ನಾಡಿನಿಂದ ಹಳ್ಳಿಗೂ ಪ್ರವೇಶಿಸಿ ಹಳೆಯ ಜನಪದರ ಆಟ, ನಾಟಕ ಬಯಲಾಟಗಳಿಗೆ ಯಾವುದು ಕವಡಿ ಕಿಮ್ಮತ್ ಇಲ್ಲ ಅದನ್ನು ನೋಡುವವರೂ ಇಲ್ಲ ಎಂದಾಗ ಆ ಜನಾಂಗ ಮುಂದೆ ಬರುವುದಾದರೂ ಹೇಗೆ ಅವರ ಆರ್ಥಿಕ ಜೀವನ ಸುಧಾರಿಸುವುದಾದರೂ ಹೇಗೆ? ಅವರ ಹೆಂಡತಿ ಮಕ್ಕಳ ಜೀವನೋಪಾಯವಾದರೂ ಹೇಗೆ? ಅವರಿಗೆ ಇರಲು ಮನೆ ಮಾಡುವುದಾದರೂ ಹೇಗೆ? ಅವರ ಮುಂದಿನ ಮಕ್ಕಳ ಭವಿಷ್ಯದ ಗತಿಯಾದರೂ ಏನು? ಹೀಗೆ ಹಲವಾರು ಪ್ರಶ್ನೆಗಳು ಪ್ರಶ್ನೆಗಳಾಗಿಯೇ ಉಳಿಯುತ್ತದೆ.

ಇಂತಹದ್ದೆ ಒಂದು ಅಲೆಮಾರು ಜನಾಂಗವಾದ ಶಿಳ್ಳೇಕ್ಯಾತರು ಈ ಮೇಲಿನ ಎಲ್ಲಾ ಕಾರಣಗಳಿಂದ ನರಳುತ್ತಿದ್ದಾರೆ. ಈ ಜನಾಂಗವು ಸುಮಾರು ಹದಿನೈದು ವರ್ಷಗಳಿಂದ ಮೈಸೂರಿನ ಏಕಲವ್ಯ ನಗರದಲ್ಲಿ ಎಂದರೆ ಕೆ.ಆರ್.ಎಸ್. ಹಾದಿಯಲ್ಲಿ ಹಲವು ಕೊಂಪೆ (ಗುಡಿಸಲು)ಗಳನ್ನು ಹಾಕಿಕೊಂಡು ಜೀವನವನ್ನು ಮಾಡುತ್ತಿದ್ದಾರೆ. ಇಲ್ಲಿ ಅವರ ಜೀವನೋಪಾಯಕ್ಕಾಗಿ ಹುಡುಕಿಕೊಂಡ ಮಾರ್ಗ ಹಾಗೂ ಅವರ ಜೀವನ ವ್ಯವಸ್ಥೆ, ಉಡುಗೆ ಮತ್ತು ತೊಡುಗೆಯನ್ನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಈ ಜನಾಂಗವು ಹಿಂದಿನ ಕಾಲದಲ್ಲಿ ರಾಜಮಹಾರಾಜರ ಸೇವಕರಾಗಿ ಅವರ ಗುಪ್ತದಳದಲ್ಲಿ ಕಾರ್ಯನಿರ್ವಹಿಸುತ್ತಾ ಆಟ ಆಡುತ್ತಾ, ಜನರಿಗೆ ಮನೋರಂಜನೆ ಕೊಡುತ್ತಾ ರಾಜ್ಯದಲ್ಲಿ ನಡೆಯುವ ಪಿತೂರಿಗಳನ್ನು ಗುರುತಿಸಿ ರಾಜರಿಗೆ ವರದಿ ಮಾಡುತ್ತಿದ್ದರು. ರಾಜರು ದಂಡೆತ್ತಿ ಬೇರೆ ರಾಜರ ಮೇಲೆ ಹೋಗುವಾಗ ಹಾದಿಯಲ್ಲಿ ಸೈನಿಕರ ಮನೋರಂಜನೆಗಾಗಿ ಹಾಸ್ಯಮಯವಾದ ಆಟಗಳು, ನೀತಿಯುತ ಆಟಗಳು ಹಾಗೂ ರಾಜಪ್ರೇಮ ಹುಟ್ಟಿಸುವಂತಹ ಕಥೆಗಳನ್ನು ಹೇಳುತ್ತಾ ಬಂದಂತಹವರು. ಮುಂದೆ ಆ ರಾಜ ಸತ್ತಾಗ ಅಥವಾ ಬೇರೆಯವರ ಆಕ್ರಮಣಕ್ಕೆ ಬಲಿಯಾದಾಗ ಅಲ್ಲಿಂದ ತಲೆಮರಿಸಿಕೊಂಡು ಗುಡ್ಡ –ಗಾಡು ಪ್ರದೇಶದಲ್ಲಿ ತಿರುಗಾಡುತ್ತಾ ಅಲ್ಲಿ ಸಿಕ್ಕಂತಹ ಪ್ರಾಣಿ–ಪಕ್ಷಿಗಳನ್ನು ಬೇಟೆಯಾಡಿ, ಹಣ್ಣು–ಹಂಪಲುಗಳನ್ನು ತಿಂದು ಜೀವನ ಮಾಡುತ್ತಾ ಜೀವನವನ್ನು ಕಳೆದವರು. ಮುಂದೆ ಕಾಲಕಳೆದಂತೆ ಕ್ರಮೇಣ ಬೆಟ್ಟದ ತುದಿಯಲ್ಲಿರುವ ಊರುಗಳಿಗೆ ಬೇಟಿಕೊಟ್ಟು ಕೆಲವೊಂದು ಬೆಟ್ಟದಲ್ಲಿ ಸಿಗುವ ವಸ್ತುಗಳನ್ನು ಮಾರಿ ಜೀವನವನ್ನು ಸಾಗಿಸುತ್ತಿದ್ದರು. ಮುಂದೆ ಏನು ಸಿಗದಿದ್ದಾಗ ಕಳ್ಳತನ ಕೊಲೆ–ಸುಲಿಗೆಯನ್ನು ಮಾಡಿದ್ದುಂಟೂ. ಹೀಗೆ ಮಾಡುತ್ತಾ ಅವರು ತಮ್ಮದೇ ಆದ ಬದುಕುವ ಹಾದಿಯನ್ನು ಹುಡುಕುತ್ತಾ ತಮ್ಮ ಮೊದಲಿನ ಕಾಯಕವಾದ ಗೊಂಬೆಯಾಟ, ಪುರಾಣ ಕಥೆಗಳನ್ನು ಹೇಳುವುದು, ಪುರಾಣದ ಕೆಲವು ಭಾಗಗಳನ್ನು ಆಟ ಅಥವಾ ನಾಟಕ ಮಾಡುವುದರ ಮುಖಾಂತರ ಜನರಿಗೆ ಸಂತೋಷಗೊಳಿಸುವುದು, ಇನ್ನೂ ಕೆಲವರು ದೇವರ ಭಜನೆಯನ್ನು ಮಾಡುತ್ತಾ ಭಿಕ್ಷೆ ಬೇಡಿ ತಮ್ಮ ದಿನ ನಿತ್ಯದ ಜೀವನವನ್ನು ಮಾಡುತ್ತಿದ್ದರು. ಹೀಗೆ ಅವರ ಮುಂದಿನ ಪೀಳಿಗೆಯು ಸಹ ಅದನ್ನೇ ಮುಂದುವರಿಸಿಕೊಂಡು ಇಂದಿಗೂ ಅವರು ಅದೇ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಅವುಗಳನ್ನು ಈ ಕೆಳಗೆ ಒಂದೊಂದಾಗಿ ನೋಡೋಣಾ.

**ಮೂಲ ಸಂಸ್ಕೃತಿಯ ಕಸುಬುಗಳು**

೧. ಬಯಲಾಟ ಆಡುವುದು

೨. ತೊಗಲುಗೊಂಬೆಯಾಟ

೩. ಪ್ರಾಣಿ ಬೇಟೆಯಾಡುವುದು

೪. ಕೀರ್ತನೆ, ಪುರಾಣಗಳನ್ನು ಮನೆ ಮನೆ ಹಾಡುತ್ತಾ ಹೋಗುವುದು

೫. ನಾಟಕ/ಆಟಗಳನ್ನು ನಿರ್ದೇಶನ ಮಾಡುವುದು

**೧. ಬಯಲಾಟ:** ಶಿಳ್ಳೇಕ್ಯಾತರು ತಲೆಮಾರಿನಿಂದ ಇವರು ಯಾವುದೋ ಒಂದು ಸಮಾಜದಲ್ಲಿ ಆಗುಹೋಗುಗಳನ್ನು ನೋಡಿಕೊಂಡು, ನೈತಿಕತೆಯ ಆಧಾರವಾಗಿ ಹಾಗೂ ಅಂದಿನ ಸಮಾಜವನ್ನು ದೃಷ್ಟಿಯಲ್ಲಿಟ್ಟುಕೊಂಡು ಆಟಗಳನ್ನು ಮಾಡಿ ಜನರೆದುರಿಗೆ ಪ್ರದರ್ಶಿಸುತ್ತಿದ್ದರು. ಈ ಆಟದಲ್ಲಿಯೂ ಎರಡು ರೀತಿಯಾಗಿವೆ. ಒಂದು ಬಯಲಾಟ ಮತ್ತೊಂದು ದೊಡ್ಡಾಟ ಎಂದು ಊರುಗಳಿಗೆ ಹೋಗಿ ಅಲ್ಲಿ ಆಟ ನಿರ್ದೇಶನ ಮಾಡುವುದಾಗಲಿ ಅಥವಾ ತಮ್ಮದೇ ಗುಂಪಿನ ಜನರು ಕೂಡಿ ಆಡುತ್ತಿದ್ದರು. ಬಯಲಾಟ ಸಾಮಾನ್ಯವಾಗಿ ಸತಿ–ಸಾವಿತ್ರಿ, ರಾಮ–ಲಕ್ಷ್ಮಣ, ದುರ್ಯೋಧನನ ವೀರಾವೇಶ, ಗಂಗಾ–ಜಮುನಾ, ಸಂಗ್ಯಾಬಾಳ್ಯಾ, ಕಬೀರದಾಸ, ಪುರಂದರದಾಸ, ಸತ್ಯಹರಿಶ್ಚಂದ್ರನ ಆಟಗಳನ್ನು ಸ್ವತಃ ಅವರೇ ಅದನ್ನು ರಚಿಸಿ, ನಿರ್ದೇಶಿಸಿ ಜನರ ಎದುರಿಗೆ ಪ್ರದರ್ಶನ ಮಾಡುತ್ತಿದ್ದರು. ಈ ಆಟದಲ್ಲಿ ಎಂಟರಿಂದ ಹತ್ತು ಪಾತ್ರಗಳನ್ನಿಟ್ಟುಕೊಂಡು ಅವರ ಸಮೂಹದವರು ಕೂಡಿಕೊಂಡು ಸಮಯಕ್ಕನುಸಾರವಾಗಿ ಪಾತ್ರ ಬದಲಾಯಿಸುತ್ತಾ ಜನರೆದುರಿಗಿಡುತ್ತಿದ್ದರು. ಈ ಬಯಲಾಟದಲ್ಲಿ ಸೂತ್ರದಾರನ ಪಾತ್ರ ಇರಲೇಬೇಕು ಕಾರಣ ಇಡೀ ಆಟದಲ್ಲಿ ಯಾವುದೇ ವಿಘ್ನಗಳು ಬರಬಾರದು ಎಂಬ ಕಲ್ಪನೆಯಿಂದ ಅವರು ಸೂತ್ರದಾರನ ಮುಖಾಂತರ ವಿಘ್ನೇಶನ ಹಾಡಿನೊಂದಿಗೆ ಆಟ ಪ್ರಾರಂಭಿಸುತ್ತಿದ್ದರು.

ಬಯಲಾಟ ರಾತ್ರಿ ಸಮಯದಲ್ಲಿ ಸುಮಾರು ಹತ್ತುಗಂಟೆ ಸಮಯಕ್ಕೆ ಪ್ರಾರಂಭಿಸಿ ಮೂರು ಗಂಟೆ ಕೆಲವೊಂದು ಸಂದರ್ಭದಲ್ಲಿ ನಾಲ್ಕು ಗಂಟೆಯವರಿಗೆ ಮುಗಿಸುವ ಸಂಪ್ರದಾಯ. ಕಾರಣ ರೈತರು ತಮ್ಮ ಊಟ ಮುಗಿಸಿಕೊಂಡು ಆರಾಮವಾಗಿ ಬಯಲಾಟವನ್ನು ನೋಡುತ್ತಿದ್ದರು. ಅಂದಿನ ಸಮಯದಲ್ಲಿ ವಿದ್ಯುತ್ ಇಲ್ಲದಿದ್ದುದರಿಂದ ದೀಪ ತಾಮ್ರದ ತಟ್ಟೆ ಅಥವಾ ಕನ್ನಡಿಗಳನ್ನು ಎರಡು ಬದಿಗೆ ಇಟ್ಟು ದೀವಟಿಗೆ ಹಚ್ಚಿ ದೀವಟಿಗಿಯ ಬೆಳಕಿನಲ್ಲಿ ಇಡೀ ರಾತ್ರಿ ಜನರಿಗೆ ಮನೋರಂಜನೆ ಮಾಡುತ್ತಿದ್ದರು. ತಮಗೆ ಸರಿಯೆನಿಸಿದವರಿಗೆ ಜನರು ಒಂದು ರೂಪಾಯಿ, ಎರಡುರೂಪಾಯಿ, ಆಯಾರ (ಮುಯ್ಯಿ) ಕೊಡುತ್ತಿದ್ದರು. ಆ ಬಂದಂತಹ ದುಡ್ಡಿನಿಂದ ಅವರು ತಮ್ಮ ಉಪಜೀವನ ನಡೆಸುತ್ತಿದ್ದರು. ಮುಂಜಾನೆ ಊರಿನ ಗೌಡ, ಪಟೇಲರಿಂದ ಜೋಳ, ಗೋಧಿ ಕೆಲವೊಂದು ದವಸ ಧಾನ್ಯಗಳನ್ನು ಪಡೆದುಕೊಂಡು ಮುಂದಿನ ಊರಿಗೆ ಪ್ರಯಾಣ ಬೆಳೆಸುವುದು ಶಿಳ್ಳೇಕ್ಯಾತರ ದೈನಂದಿನ ಕಾರ್ಯವಾಗಿತ್ತು.

**ತೊಗಲುಗೊಂಬೆಯಾಟ:** ಇದು ಶಿಳ್ಳೇಕ್ಯಾತರ ಮೂಲ ಮತ್ತು ಕುಲಕಸುಬು. ಇವರ ಜೀವನಾಧಾರವೆಂದರೆ ತೊಗಲುಗೊಂಬೆಯಾಟ ಆಡಿಸುವುದು, ಅದರಿಂದ ಬಂದಂತಹ

ಹಣದಿಂದ ಅವರ ದಿನನಿತ್ಯದ ಉಪಜೀವನವನ್ನು ನಡೆಸುವುದು. ಇವರು ತಮ್ಮ ಗೊಂಬೆಗಳು, ಗಡಿಗೆ ಮಡಿಕೆಗಳು ಮತ್ತು ಊಟಕ್ಕೆ ಬೇಕಾದ ಎಲ್ಲ ಪಾತ್ರೆಗಳನ್ನು ಒಂದು ಬುಟ್ಟಿಯಲ್ಲಿಟ್ಟುಕೊಂಡು ಒಂದು ಕತ್ತೆಯ ಎರಡು ಬದಿಗೆ ಸಾಮಾನುಗಳನ್ನು ಹಾಕಿಕೊಂಡು ಹೆಂಡತಿಮಕ್ಕಳು ಎಲ್ಲರೂ ಸೇರಿಕೊಂಡು ಅವರ ಜೊತೆಗೆ ಕುರಿ,ಕೋಳಿ ಇಡೀ ಕುಟುಂಬ ಸಮೇತ ಊರಿಂದೂರಿಗೆ ಪ್ರಯಾಣ ಬೆಳೆಸುತ್ತಾರೆ. ಒಂದು ಊರಲ್ಲಿ ಕನಿಷ್ಠ ಎಂದರೂ ಹದಿನೈದರಿಂದ ಇಪ್ಪತ್ತು ದಿವಸವಾದರೂ ಇರುತ್ತಾರೆ. ಯಾವ ಊರಿಗೆ ಹೋಗುತ್ತಾರೆಯೋ ಅ ಊರಿನಲ್ಲಿ ದೇಗುಲ, ಹಳೆಕೋಟೆ, ದೇವರ ಗುಡಿಯ ಪಡಸಾಲೆ ಅಥವಾ ಡೇರೆಯನ್ನು ಹಾಕುತ್ತಾರೆ. ಅದರಲ್ಲಿಯೇ ಅವರು ಮಲಗುವುದು ಇನ್ನಿತರ ದಿನನಿತ್ಯದ ಕಾರ್ಯಕ್ರಮಗಳು. ಶಿಳ್ಳೇಕ್ಯಾತರು ತೊಗಲುಗೊಂಬೆಯಾಟ ಆಡಿಸುವುದರಿಂದ ಮಳೆ ಬರುತ್ತದೆ ಎಂಬ ಕಲ್ಪನೆ ಊರಿನವರಲ್ಲಿ (ಹಳ್ಳಿಯವರಲ್ಲಿ) ಇರುವುದರಿಂದ ಇವರು ಇದ್ದ ಊರಿನ ಸುತ್ತಮುತ್ತಲಿನ ಊರಿನವರು ಇವರಿಗೆ ವೀಳ್ಯದೆಲೆ ಅಡಿಕೆಯನ್ನು ಕೊಟ್ಟು ಆಮಂತ್ರಣವನ್ನು ಕೊಡುತ್ತಾರೆ. ಹಾಗೆ ಇವರು ಒಂದೊಂದು ಊರಿನಲ್ಲಿ ಒಂದು ಆಟವಾಡಿ ಆ ಊರಿನವರು ಕೊಟ್ಟ ದವಸ-ಧಾನ್ಯಗಳು ಹಾಗೂ ಹಣವನ್ನು ತೆಗೆದುಕೊಂಡು ಬರುತ್ತಾರೆ. ಅದರೊಂದಿಗೆ ಊರಿನ ಪಟೇಲರು, ಗೌಡ್ರು ಅಥವಾ ಶ್ಯಾನುಭೋಗರು ಐದಾರು ಜನ ಎತ್ತಿಕೊಂಡು ಅವರು ಕುರಿನೋ ಅಥವಾ ಕೋಳಿನೋ ಕೊಡುಗೆಯಾಗಿ ಕೊಡುವವರಿಗೂ ಅವರ ಹೆಸರನ್ನು ಕೂಗುತ್ತಾ ಕುಣಿಯುವರು. ಆಗ ಗೌಡ್ರು ಕೊಟ್ಟಂತಹ ಕಾಣಿಕೆಯನ್ನು ತೆಗೆದುಕೊಂಡು ಎಲ್ಲರೂ ಸಂತೋಷವಾಗಿ ಹೋಗುವರು. ಇದೆ ಇವರ ಆ ದಿನದ ಸಂಬಳ. ಇವರಿಗೆ ಧಾನ್ಯ ಕೂಡಿಸುವುದಕ್ಕೆ ಆಗುವುದಿಲ್ಲ. ಬಂದಂತಹ ದವಸಧಾನ್ಯ ಅಥವ ಹಣ ಅಲ್ಲಿರುವಾಗಲೇ ಖಾಲಿ ಮಾಡಿಕೊಂಡು ಬರುವರು. ಒಂದುವೇಳೆ ಆ ಊರಲ್ಲಿ ಆಟವಾಡದಿದ್ದರೆ ಅದೇ ಊರಲ್ಲಿ ಇದ್ದು ಭಿಕ್ಷಾಟನೆ ಮಾಡಿ ಅಥವಾ ಕೂಲಿಕೆಲಸ ಮಾಡಿ ಆ ದಿನದ ಹೊಟ್ಟೆ ತುಂಬಿಸಿಕೊಳ್ಳುವಂತಹವರು ಎಷ್ಟೋ ಜನ. ಅದೇ ರೀತಿ ಒಂದೊಂದು ಊರಲ್ಲಿ ಕೂಲಿ ಕೆಲಸ ಮಾಡಿಕೊಂಡು ಅಲ್ಲಿಯೇ ಇದ್ದಂತಹ ಘಟನೆಗಳು ಹಲವಾರಿವೆ ಎಂದು ಇಲ್ಲಿಯವರು ಹೇಳುತ್ತಾರೆ. ಅಲ್ಲಿಯೇ ಇದ್ದುಕೊಂಡು ಮಕ್ಕಳ ವಿದ್ಯಾಭ್ಯಾಸವನ್ನು ಮಾಡಿಕೊಂಡು ಹೇಗೋ ಒಂದು ಕಡೆ ಜೀವನ ಮಾಡುತ್ತಾರೆ. ಒಟ್ಟಾರೆ ಹೇಳುವುದಾದರೆ ಶಿಳ್ಳೇಕ್ಯಾತರು ಅಂದಿನ ದುಡಿಮೆ ಅಂದಿನ ಊಟ.

**ಪ್ರಾಣಿಗಳ ಬೇಟೆ:** ಶಿಳ್ಳೇಕ್ಯಾತರು ತಾವು ಬಿಡಾರ ಹಾಕಿದ ಊರುಗಳಲ್ಲಿ ತೊಗಲುಗೊಂಬೆ ಆಟದ ಜೊತೆಗೆ ತಮ್ಮ ಉಪಜೀವನಕ್ಕೆಂದು ಬೇಟೆಗಳನ್ನು ಹೊಡೆಯುವ ಕಲೆ ಕರಗತ ಮಾಡಿಕೊಂಡಿರುತ್ತಾರೆ. ಹುಟ್ಟು ಬೇಟೆಗಾರರಾದ ಇವರು ಮೊಲ, ಜಿಂಕೆ, ಕಾಡಹಂದಿ, ಈ ರೀತಿಯ ಪ್ರಾಣಿಗಳನ್ನು ತಮ್ಮ ನಾಯಿಗಳ ಸಹಾಯದಿಂದ ಅವುಗಳನ್ನು ಕಾಡಿನಲ್ಲಿ, ಹೊಲದಲ್ಲಿ ಹೋಗಿ ಬೇಟೆ ಆಡಿ ಸಿಕ್ಕಂತಹ ಪ್ರಾಣಿಗಳನ್ನು ಊರಿನವರಿಗೆ ಹಣಕ್ಕಾಗಿ ಕೊಟ್ಟು ಅವರಿಗಾಗಿ ಸ್ವಲ್ಪ ಇಟ್ಟುಕೊಂಡು ಅವರು ಆ ದಿನದ ಮಟ್ಟಿಗೆ ಸರಾಯಿ ಕುಡಿದು ಮಾಂಸದ ಊಟ ಮಾಡಿಕೊಂಡು ಹಾಯಾಗಿ ಜೀವನವನ್ನು ಕಳೆಯುವರು. ಇದರ ಜೊತೆಗೆ ಹಕ್ಕಿ–ಪಿಕ್ಕಿಯವರಂತೆ ಇವರು ಸಹ ಪಕ್ಷಿಗಳನ್ನು ಸಹ ತುಂಬ ಸರಳವಾಗಿ ಹಾಗೂ ಜೀವಂತವಾಗಿ ಹಿಡಿಯುವ ಕಲೆಯನ್ನು ಕರಗತ ಮಾಡಿಕೊಂಡಿದ್ದಾರೆ. ಇದರಿಂದಲೂ ಸಹ ಅವರ ಜೀವನ ಸುಗಮವಾಗಿ ನಡೆಯುತ್ತದೆ. ದಿನದಲ್ಲಿ ಊರೂರು ಭಿಕ್ಷಾಟನೆ ಸಾಯಂಕಾಲ ಪ್ರಾಣಿಪಕ್ಷಿಗಳ ಬೇಟೆ ಕೆಲವು ಪಕ್ಷಿಗಳನ್ನು ಪಳಗಿಸಿ ಇಟ್ಟಿರುವುದರಿಂದ ಆ ಪಕ್ಷಿಗಳ ಸಹಾಯದಿಂದ ಉಳಿದ ಪಕ್ಷಿಗಳನ್ನು ಹಿಡಿಯುತ್ತಾರೆ. ಹಾಗೆ ಅವರು ಸ್ವತಃ ಬಲೆಗಳನ್ನು ಇಟ್ಟಿರುವುದರಿಂದ ಆ ಬಲೆಗಳ ಸಹಾಯದಿಂದ ಪಕ್ಷಿಗಳನ್ನು ತುಂಬಾ ಸರಾಗವಾಗಿ ಹಿಡಿಯುತ್ತಾರೆ.



ಒಟ್ಟಾರೆ ಇವರು ಯಾವುದೇ ಊರಿಗೆ ಹೋಗಲಿ ಅಲ್ಲಿ ಹೇರಳವಾಗಿ ಸಿಗುವಂತಹ ಪ್ರಾಣಿ–ಪಕ್ಷಿ, ಮೀನು, ಮತ್ತಿತರ ಪ್ರಾಣಿಗಳನ್ನು ಹಿಡಿದು ಒಂದಿಷ್ಟು ಹಣಕ್ಕೆ ಮಾರಾಟ ಮಾಡಿ ತಾವು ಒಂದಿಷ್ಟು ತಿಂದು ಹಾಯಾಗಿ ಜೀವನವನ್ನು ನಡೆಸುವಂತಹ ಸ್ವಭಾವದವರು.

**ಕೀರ್ತನೆ ಮತ್ತು ಪುರಾಣಗಳನ್ನು ಹೇಳುವುದು:** ಶಿಳ್ಳೇಕ್ಯಾತರಲ್ಲಿ ಕೆಲವೊಂದು ಗುಂಪು ರಾಮಾಯಣ ಮಹಾಭಾರತ ಹಾಗೂ ಕೆಲವೊಂದು ಪುರಾಣದ ಭಾಗಗಳನ್ನು ತೆಗೆದುಕೊಂಡು ಅವರು ಮನೆ ಮನೆಗೆ ಹಾಡು ಹಾಡುತ್ತಾ ಹೋಗಿ ಆ ಒಂದು ರಾಮಾಯಣ ಅಥವಾ ಮಹಾಭಾರತ ತಮ್ಮ ಜನಪದೀಯ ಶೈಲಿಯಲ್ಲಿ ಮನೆಯಿಂದ ಮನೆಗೆ ಸಾರುತ್ತಾ ಹೋಗುವರು. ಆ ಮನೆಯಲ್ಲಿ ಕೊಟ್ಟಂತಹ ಭೋಜನವನ್ನು ದೇವರ ಹೆಸರಿನಲ್ಲಿ ಸ್ವೀಕಾರ ಮಾಡಿ ಅವರನ್ನು ಹರಸುತ್ತಾ ಮುಂದಿನ ಮನೆಗೆ ಹೋಗುವರು. ಹೀಗೆ ಅವರು ತಮ್ಮ ಹಾಡಿನ ಮೂಲಕ ಜನರಿಗೆ ದೇವರ ಸಂದೇಶ, ಹಿತವಚನ ಸಾರುತ್ತಾ, ಜನರಿಗೆ ಅವರ ಶೈಲಿಯಲ್ಲಿಯೇ ತಿಳಿಸಿ ಅವರಿಂದ ಬಂದಂತಹ ದವಸಧಾನ್ಯವಾಗಿರಬಹುದು, ಹಣವಾಗಿರಬಹುದು ಅಥವಾ ಊಟಬಟ್ಟೆ–

ಯಾಗಿರಹುದು ಅದನ್ನು ತೆಗೆದುಕೊಂಡು ಅಂದಿನ ದಿನಕ್ಕೆ ಬೇಕಾಗುವಷ್ಟು ಸಂಗ್ರಹಿಸಿಕೊಂಡು ಹೋಗುವರು. ಹಾಗೆ ಇನ್ನೂ ಮಳೆಗಾಲದಂತಹ ಸನ್ನಿವೇಶದಲ್ಲಿ ಯಾವುದೋ ದೇವಸ್ಥಾನದ ಪಡಸಾಲೆಯಲ್ಲಿ ದೇವರ ಕೀರ್ತನೆ ಹಾಗೂ ಪುರಾಣಗಳನ್ನು ಹೇಳುವರು. ಇದು ತುಂಬಾ ಸ್ವಾರಸ್ಯಭರಿತವಾಗಿ ಒಂದೊಂದು ವಾಕ್ಯವನ್ನುಒಬ್ಬರು ಹೇಳುವರು ಇನ್ನೊಬ್ಬರು ಅದನ್ನು ಹಾಡಿ ಜನರಿಗೆ ಸಂಗೀತದ ಮಾಧುರ್ಯವನ್ನು ಹಂಚುವರು. ಆಗ ಇಡೀ ಊರಿನ ಜನರು ಅಲ್ಲಿ ಸೇರಿ ಅವರಿಗೆ ಒಂದಿಷ್ಟು ದುಡ್ಡನ್ನು ಆಯಾರ (ಹಣಕೊಡುವುದು) ಮಾಡುವುದರ ಮುಖಾಂತರ ಅವರ ಕಲೆಗೆ ಮನ್ನಣೆಯನ್ನು ಕೊಡುವರು. ಹಾಗೆ ಅವರ ಆ ದಿನದ ಊಟ ಉಪಚಾರವು ಆ ಊರಿನ ಗೌಡನ ಮನೆಯಿಂದ ಬರುವಂತಹದ್ದು, ಒಂದೇ ಮಾತಿನಲ್ಲಿ ಹೇಳುವುದಾದರೆ ಇವರು ತಮ್ಮ ಜೀವನದ ಹಂಗನ್ನು ತೊರೆದು ಊರಿನ ಜನರಿಗೆ ನೀತಿ ಪಾಠವನ್ನು ಹೇಳುವಂತಹವರು. ತಮ್ಮಲ್ಲಿ ಸಾವಿರಾರು ನೋವುಗಳನ್ನು ಹೊತ್ತುಕೊಂಡು ಜನರಿಗೆ ನಗಿಸುವಂಥವರು. ಹೀಗಾಗಿ ಇವರ ಜೀವನ ಅಂದಿನ ದಿನಕ್ಕೆ ಅಂತ್ಯ ಮತ್ತೆ ಮುಂದಿನ ದಿನಕ್ಕೆ ಯಾವುದೇ ಮುಂದಾಲೋಚನೆಯಿಲ್ಲ. ದೇವರು ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೇ ಎಂಬ ವಿಚಾರ ಹೊಂದಿರತಕ್ಕಂಥವರು.

**ಆಟ/ನಾಟಕಗಳ ನಿರ್ದೇಶನ ಮಾಡುವುದು:** ಶಿಳ್ಳೇಕ್ಯಾತರು ಹಲವಾರು ಕಲೆಗಳನ್ನು ಹೊಂದಿರತಕ್ಕಂತಹವರು. ತಲೆ–ತಲೆಮಾರಿನಿಂದ ಬಂದಂತಹ ಈ ಕಲೆಗಳು ತಾತ–ಮುತ್ತಾತನಿಂದ ಬಂದಂತಹವುಗಳು ಹೀಗಾಗಿ ಇವರು ಯಾವುದೇ ಅಕ್ಷರ ಬರದಿದ್ದರೂ ಸಹ ಬಾಯಿಂದ – ಬಾಯಿಗೆ ಬಂದಂತಹ ಬಯಲಾಟ ಅಥವಾ ನಾಟಕಗಳ ಮಾತುಗಳು ಅವರ ಬಾಯಿಯಲ್ಲಿ ಸರಾಗವಾಗಿ ಬರುತ್ತವೆ. ಅದರಲ್ಲಿ ಅವರದು ಎತ್ತಿದ ಕೈ. ಯಾವ ಊರಲ್ಲಿ ಹೋಗಿ ಬಿಡಾರ ಹಾಕುತ್ತಾರೆಯೋ ಆ ಊರಿನವರು ಯಾವುದಾದರೂ ಆಟ ಮಾಡಲು ಸಿದ್ಧರಾಗಿದ್ದರೇ ಅಲ್ಲಿಯೇ ಮೂರ್‍ನಾಲ್ಕು ತಿಂಗಳುಗಳಿದ್ದು ಅವರಿಗೆ ಬೇಕಾದಂತಹ ಆ ಬಯಲಾಟಗಳಾಗಿರಬಹುದು ಅಥವಾ ನಾಟಕಗಳಾಗಿರಬಹುದು. ಅವರ ಊರಲ್ಲಿ ಊರವರಿಂದಲೇ ಮಾಡಿಸಿ, ಬಂದಂತಹ ಸಂಬಳವನ್ನು ತೆಗೆದುಕೊಂಡು ಬರುವರು. ಇವರು ಆ ಬಯಲಾಟಕ್ಕೆ ಬೇಕಾದಂತಹ ಬಣ್ಣ ಬಟ್ಟೆಗಳ ತಯಾರಿ ಮಾಡುವುದರಿಂದ ಹಿಡಿದು ಸಂಗೀತವು ಸಹ ಇವರದೇ ಆಗಿರುತ್ತದೆ. ಹೀಗಾಗಿ ಇವರಿಗೆ ವರ್ಷದಲ್ಲಿ ಒಂದೆರಡು ಬಯಲಾಟ ಮಾಡಿಸಿದರೆ ಸಾಕು ಇವರ ಒಂದು ವರ್ಷದ ಉಪಜೀವನ ಸಾಗಿಹೋಗುತ್ತದೆ. ಯಾವ ಊರಲ್ಲಿ

ಇವರು ಬಿಡಾರ ಹಾಕುತ್ತಾರೋ ಆ ಊರಿನ ಅಕ್ಕ-ಪಕ್ಕದ ಊರಿನವರು ತಮ್ಮ ಊರಲ್ಲಿ ದೇವರ ಜಾತ್ರೆಯಿದ್ದರೆ ಅದರ ಪೂರ್ವಸಿದ್ಧತೆಯನ್ನು ಮಾಡಿಕೊಳ್ಳುತ್ತಿದ್ದರು. ಜಾತ್ರೆ ದಿವಸ ಬೇರೆ ಊರಿನ ಜನರು ಬರುವುದರಿಂದ ಅಂದಿನ ದಿನದ ಜಾಗರಣೆ ಮಾಡಲು ಬಯಲಾಟ-ನಾಟಕಗಳನ್ನು ಊರಲ್ಲಿ ಹಮ್ಮಿಕೊಳ್ಳುತ್ತಿದ್ದರೂ ಅದಕ್ಕೆ ಆ ಊರಿನವರು ಇವರನ್ನು ಮುಂಗಡವಾಗಿ ಹಣವನ್ನು ಕೊಟ್ಟು ಅವರ ಸಮಯಕ್ಕೆ ಸರಿಯಾಗಿ ಆ ಬಯಲಾಟದ ತಾಲೀಮು ಮುಗಿಸಿಕೊಳ್ಳುತ್ತಿದ್ದರು. ಅದರಿಂದ ಅವರು ಮಜೂರಿಯನ್ನು ಪಡೆಯುತ್ತಿದ್ದರು. ಹಾಗೆ ಆ ಬಯಲಾಟದ ದಿನ ಊರಿನ ಪಟೇಲರು ಶ್ಯಾನಭೋಗರು ಇವರಿಗೆ ಸನ್ಮಾನ ಮಾಡಿ ಉಡುಗೊರೆಯನ್ನು ಕೊಟ್ಟು ಕಳುಹಿಸುತ್ತಿದ್ದರು.

ಹೀಗೆ ಶಿಳ್ಳೇಕ್ಯಾತರು ತಮ್ಮ ಪರಂಪರಾಗತವಾಗಿ ಬಂದಂತಹ ಕಲೆಗಳನ್ನು ಬಳಸಿಕೊಂಡು ತಮ್ಮ ಕುಟುಂಬದ ಉಪಜೀವನವನ್ನು ಹಾಗೂ ದಿನನಿತ್ಯದ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದರು. ಇಂದಿಗೂ ಸಹ ಈ ಒಂದು ಕಲೆಯಿಂದ ಸಾಕಷ್ಟು ಕುಟುಂಬ ಉಪಜೀವನ ನಡೆಸುತ್ತಿದ್ದಾರೆ. ಇಂದು ಸಿನಿಮಾಗಳು ಹಳ್ಳಿಗೂ ಲಗ್ಗೆ ಹಾಕಿ ಜನಪದ ಕಲೆಯನ್ನು ಮೂಲೆಗುಂಪು ಮಾಡಿದರೂ ಸಹ ಹಳ್ಳಿಗಳಲ್ಲಿ ಇಂದಿಗೂ ಪ್ರತಿಯೊಂದು ಊರು ಜಾತ್ರೆಗೆ ಬಯಲಾಟ, ದೊಡ್ಡಾಟಗಳು ಇಂದಿಗೂ ಪ್ರಚಲಿತದಲ್ಲಿವೆ. ಇವರು ವರ್ಷಕ್ಕೆ ಈ ಕಲಾಸಕ್ತ ಊರಿನವರನ್ನು ಹಿಡಿದು ತಮ್ಮ ವರ್ಷದ ಗಂಜಿಯನ್ನು ಮಾಡಿಕೊಳ್ಳುತ್ತಾರೆ. ಆದರೆ ದುರ್ದೈವ ಇವರು ಹಣವನ್ನು ಕೂಡಿಟ್ಟು ಮುಂದಿನ ಜೀವನದ ಬಗ್ಗೆ ಯೋಚನೆ ಮಾಡುವಂತಹವರಲ್ಲ. ಏನಿದ್ದರೂ ಅಂದಿನ ವಿಚಾರ ಅಂದಿಗೆ.

**ಗ್ರಾಮ ಸಂಸ್ಕೃತಿಯ ಕಸುಬುಗಳು**

- ಕುಲುಮೆ ಹಾಕುವುದು
- ಕರಿಕಟ್ಟುವುದು
- ಬಾಂಡೆ ಮಾರುವುದು
- ಬಾಂಡೆ ಬೆಸೆಯುವುದು
- ಚಾಕು ಸಾಣೆ ಹಿಡಿಯುವುದು
- ಮಕ್ಕಳ ಆಟಿಕೆ ಸಾಮಾನುಗಳನ್ನು ಮಾರಾಟ ಮಾಡುವುದು
- ಔಷಧಿಯ ಗಿಡಮೂಲಿಕೆಗಳನ್ನು ಮಾರಾಟ ಮಾಡುವುದು.

**ಕುಲುಮೆ ಹಾಕುವುದು:** ಶಿಳ್ಳೇಕ್ಯಾತರು ತಮ್ಮ ಕುಲಕಸುಬಿನೊಂದಿಗೆ ತಮ್ಮ ಜೀವನುಪಾಯಕ್ಕಾಗಿ ಅವರು ಬೇರೆ ಕಸುಬುಗಳನ್ನು ಸಹ ಮೈಗೂಡಿಸಿಕೊಂಡು ತಮ್ಮ ದಿನನಿತ್ಯದ ಉಪಜೀವನವನ್ನು ನಡೆಸುತ್ತಾರೆ. ಅವರು ಕೇವಲ ತಮ್ಮ ಕುಲಕಸುಬನ್ನು ನಂಬಿಕೊಂಡರೆ ದಿನನಿತ್ಯದ ತಮ್ಮ ಕುಟುಂಬವನ್ನು ನೋಡಿಕೊಂಡು ಹೋಗುವುದು ತುಂಬಾ ಕಷ್ಟವಾಗುತ್ತದೆ. ಹೀಗಾಗಿ ಅವರು ಊರಿಂದೂರಿಗೆ ಹೋಗುವಾಗ ತಮ್ಮ ಜೊತೆಗೆ ಒಂದು ಕುಲುಮೆ ಮತ್ತು ಅದಕ್ಕೆ ಬೇಕಾದ ಸಾಮಾಗ್ರಿಗಳನ್ನು ತೆಗೆದುಕೊಂಡು ಹೋಗುತ್ತಾರೆ. ಯಾವ ಊರಲ್ಲಿ ಅವರು ಬಿಡಾರ ಹಾಕುತ್ತಾರೆ, ಅದೇ ಊರಿನಲ್ಲಿ ಕೊಡಲಿ, ಕುಡುಗೋಲು ಒಕ್ಕಲುತನದ ಸಾಮಾನುಗಳನ್ನು ಅವರು ಹರಿತ ಮಾಡುವುದು ಹಾಗೂ ಕೆಲವೊಂದು ಕೃಷಿಗೆ ಬೇಕಾಗುವ ಕಬ್ಬಿಣದ ಸಾಮಾನುಗಳನ್ನು ಮಾಡಿ ಅದರಿಂದ ಬಂದಂತಹ ಹಣದಿಂದ ಅವರು ಜೀವನವನ್ನು ನಡೆಯಿಸುತ್ತಾರೆ. ಹೀಗೆ ಅವರ ಕುಲಕಸುಬಿನೊಂದಿಗೆ ಇದೊಂದು ಉಪ ಉದ್ಯೋಗವಾಗಿ ರೂಢಿಸಿಕೊಂಡು ಜೀವನವನ್ನು ನಡೆಸುತ್ತಾರೆ.

**ಕರಿಕಟ್ಟುವುದು:** ತಾವು ಬಿಡಾರ ಹಾಕಿದ ಊರಲ್ಲಿ ಕಂಬಳಿಗಳ ಕರಿಕಟ್ಟುವ ಕೆಲಸ ಇವರು ಮಾಡುತ್ತಾರೆ. ಬಿಡುವಿನ ವೇಳೆಯಲ್ಲಿ ಊರಲ್ಲಿರುವ ಕಂಬಳಿಗಳನ್ನು ತೆಗೆದುಕೊಂಡು ಕೆಲವೊಂದು ಬಣ್ಣದ ರೇಷ್ಮೆ ಅಥವಾ ಹತ್ತಿಯ ನೂಲುಗಳನ್ನು ತೆಗೆದುಕೊಂಡು ಕಂಬಳಿಯ ಎರಡು ಬದಿಯ ಉಣ್ಣೆಯನ್ನು ತೆಗೆದು ಅದಕ್ಕೆ ತಮ್ಮಲ್ಲಿರುವ ನೂಲಿನ ಎಳೆಗಳಿಂದ ಜೋಡಿಸಿ ಅದನ್ನು ಅತ್ಯಂತ ಅಚ್ಚುಕಟ್ಟಾಗಿ ಜೋಡಿಸುತ್ತಾರೆ. ಅದಕ್ಕೆ ಯಾವುದೇ ಯಂತ್ರದ ಸಹಾಯ ಬೇಕಾಗಿಲ್ಲ. ಬಿದಿರಿನಿಂದ ಬುಟ್ಟಿ ಹೆಣೆದಂತೆ ಕೇವಲ ಎರಡು ಅಥವಾ ಮೂರು ತಾಸುಗಳಲ್ಲಿ ಒಂದು ಅಂದಚಂದದ ಕಂಬಳಿಯಾಗಿ ಪರಿವರ್ತನೆ ಮಾಡುತ್ತಾರೆ. ಇದರಿಂದ ಆ ಕಂಬಳಿ ಅತ್ಯಂತ ಸುಂದರವಾಗಿ ಹಾಗೂ ಅಚ್ಚುಕಟ್ಟಾದ ಕಂಬಳಿಯಾಗಿ ಹೊರಹೊಮ್ಮುತ್ತದೆ. ಈ ತರಹ ಕರಿಕಟ್ಟುವುದರಿಂದ ಆ ಕಂಬಳಿ ಸುಮಾರು ದಿವಸ ಬಾಳಿಕೆ ಬರುತ್ತದೆ. ರೈತರ ಸ್ನೇಹಿತವಾದ ಈ ಕಂಬಳಿಯನ್ನು ಚಳಿ ಮತ್ತು ಮಳೆಯಲ್ಲಿ ಉಪಯೋಗಿಸಬಹುದು. ಹಾಗೆಯೇ ರಾಶಿಯ ಸಂದರ್ಭದಲ್ಲಿ ಪೂಜೆಗೆ ಅರ್ಹವಾದ ಕಂಬಳಿಯನ್ನು ಉತ್ತರ ಕರ್ನಾಟಕದ ಪ್ರತಿಯೊಬ್ಬ ರೈತ ಎಷ್ಟೆ ಹಣವಾದರೂ ಕೊಟ್ಟು ಅದನ್ನು ಸುಂದರವಾಗಿ ಹಾಗೂ ಬಾಳ್ವಿಕೆ ಬರುವಂತೆ ಕರಿಕಟ್ಟಿಸುತ್ತಾರೆ. ಹೀಗೆ ಒಂದು ಕಂಬಳಿಯ ಕರಿಯನ್ನು ಕಟ್ಟಿದಾಗ ಜೋಳ ಅಥವಾ ದುಡ್ಡು ಬರುತ್ತದೆ. ಇದರಿಂದ ಅವರ ಜೀವನೋಪಾಯಕ್ಕೆ ತುಂಬಾ ಅನುಕೂಲವಾಗುತ್ತದೆ.

**ಬಾಂಡೆ/ಪಾತ್ರೆಗಳನ್ನು ಮಾರಾಟ ಮಾಡುವುದು:** ಗಂಡು ಮತ್ತು ಹೆಣ್ಣುಮಕ್ಕಳು ಮಾರಾಟ ಮಾಡುತ್ತಾರೆ. ಆದರೆ ಬಾಂಡೆಗಳನ್ನು ಹೆಚ್ಚಿನ ಪ್ರಮಾಣದಲ್ಲಿ ಗಂಡುಮಕ್ಕಳ ಮಾರಾಟ ಮಾಡುವ ರೂಢಿಯುಂಟು. ಇವರು ಊರೂರು ಅಲೆದಾಡುವುದರಿಂದ ಪಟ್ಟಣಕ್ಕೆ ಬಂದಾಗ ಅಲ್ಲಿಂದ ಕೆಲವೊಂದು ದಿನನಿತ್ಯಕ್ಕೆ ಬೇಕಾದ ಪಾತ್ರೆಗಳನ್ನು ಖರೀದಿಸಿ ಅವುಗಳನ್ನು ಹಳ್ಳಿಯಲ್ಲಿ ರೈತರಿಗೆ ಹಣವನ್ನು ಪಡೆದು ಅಥವಾ ದವಸಧಾನ್ಯಗಳನ್ನು ಪಡೆದು ಪಾತ್ರೆಗಳನ್ನು ಕೊಡುತ್ತಾರೆ. ಹಾಗೆ ಇವರು ರೈತರಲ್ಲಿರುವ ಹಳೆಯ ಪಾತ್ರೆಗಳನ್ನು ಕಡಿಮೆ ಬೆಲೆಯಿಂದ ಪಡೆದು ಪಟ್ಟಣಕ್ಕೆ ಹೋದಾಗ ಆ ಹಳೆಯ ಪಾತ್ರೆಗಳನ್ನು ಹಾಕಿ ಹೊಸ ಪಾತ್ರೆಗಳನ್ನು ಖರೀದಿ ಮಾಡಿ ಮಾರಾಟ ಮಾಡುತ್ತಾರೆ. ಈ ರೀತಿಯಾಗಿ ಅವರು ಒಂದಿಲ್ಲಾ ಒಂದು ರೀತಿ ಜೀವನವನ್ನು ನಡೆಯಿಸಿಕೊಂಡು ಹೋಗಲು ಅವರು ಒಂದೊಂದು ಕಸುಬನ್ನು ರೂಢಿಸಿಕೊಂಡಿರುತ್ತಾರೆ.

**ಬಾಂಡೆ/ಪಾತ್ರೆ ಬೆಸೆಯುವುದು:** ಇವರು ಪಾತ್ರೆಗಳನ್ನು ಮಾರಾಟ ಮಾಡುವುದರ ಜೊತೆ-ಜೊತೆಯಲ್ಲಿಯೇ ಒಡೆದಂತ ಹಾಗೂ ಮುರಿದಂತೆ ದೊಡ್ಡ ದೊಡ್ಡ ಪಾತ್ರೆಗಳನ್ನು ಕೆಲವೊಬ್ಬರು ಮಾರಾಟ ಮಾಡುವುದಿಲ್ಲ. ಅಂತಹವರು ಅದೇ ಪಾತ್ರೆಯನ್ನು ರಿಪೇರಿ ಮಾಡಿಸುತ್ತಾರೆ. ಅಂತಹ ಪಾತ್ರೆಗಳನ್ನು ಉದಾಹರಣೆಗೆ ತಾಮ್ರಕೊಡ, ರಂಜಣಿಗಿ, ಬಗೋಣೆ ಹೀಗೆ ದೊಡ್ಡ ದೊಡ್ಡ ಪಾತ್ರೆಗಳನ್ನು ಅವರು ಅಲ್ಲಿಯೇ ಕಾಯಿಸಿ ಅದನ್ನು ಬೆಸೆದು ಸರಿ ಮಾಡಿಕೊಡುತ್ತಾರೆ. ಹೀಗೆ ಪಾತ್ರಗಳ ಮಾರಾಟ ಮಾಡುವುದಲ್ಲದೆ ಕೊಂಡುಕೊಳ್ಳುವುದು ಹಾಗೂ ಅವುಗಳ ರಿಪೇರಿ ಒಂದೆ ವೃತ್ತಿಗೆ ಸಂಬಂಧಿಸಿದ ಕಾರ್ಯಗಳನ್ನು ರೂಢಿಸಿಕೊಂಡು ಸುಂದರ ಹಾಗೂ ಸೊಗಸಾದ ಜೀವನ ಶೈಲಿಯನ್ನು ಅಳವಡಿಸಿಕೊಂಡಿರುತ್ತಾರೆ.

**ಚಾಕು ಸಾಣೆ ಹಿಡಿಯುವುದು:** ಒಂದು ಸೈಕಲ್ ಚಕ್ರ ಬಗಿಲಿಗೆ ಹಾಕಿಕೊಂಡು ಒಂದು ಊರು ಸುತ್ತು ಹಾಕಿದರೆ ಸಾಕು ನೂರಾರು ಚಾಕು, ಕುಡುಗೋಲು, ಕುರೂಪಿ ಹಾಗೂ ದಿನನಿತ್ಯ ಕೊಯ್ಯಲು ಉಪಯೋಗಿಸುವ ವಸ್ತುಗಳನ್ನು ಚೂಪುಮಾಡಿ ಒಂದಕ್ಕೆ ಆಗ ಎಂಟಾಣೆ, ರೂಪಾಯಿ ತೆಗೆದುಕೊಳ್ಳುತ್ತಿದ್ದರು. ಇಂದು ಒಂದು ಚಾಕುವಿಗೆ ಐದರಿಂದ ಆರು ರೂಪಾಯಿ ಒಂದೂರಲ್ಲಿ ಐವತ್ತರಿಂದ ಅರವತ್ತು ಚಾಕು ಸಾಣೆ ಹಿಡಿದರೆ ಎರಡು ನೂರರಿಂದ ಮುನ್ನೂರು ರೂಪಾಯಿ ಹೀಗೆ ಬಂದಂತಹ ದುಡ್ಡನ್ನು ಜಮಾಯಿಸಿ ತಮ್ಮ ಊರಿಗೆ ಹೋಗುವಾಗ ತೆಗೆದುಕೊಂಡು ಹೋಗುತ್ತಾರೆ. ಈ ಹಣವನ್ನು ಅದರಿಂದ ವಯಸ್ಸಾದ ಅಪ್ಪ-ಅಮ್ಮ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ವೆಚ್ಚಮಾಡುವುದುಂಟು.

**ಮಕ್ಕಳ ಆಟಿಕೆ ಸಾಮಾನುಗಳನ್ನು ಮಾರಾಟ ಮಾಡುವುದು:** ತುಂಬಾ ಕಟ್ಟಿಗೆಯ ಕೆಲಸದಲ್ಲಿ ನಿಪುಣರಾದ ಶಿಳ್ಳೆಕ್ಯಾತರು ಬಿಡಾರದಲ್ಲಿಯೇ ಮಧ್ಯಾಹ್ನದ ಹೊತ್ತಿನಲ್ಲಿ ಸುಮ್ಮನೆ ಮಲಗಿ ಕಾಲಕಳೆಯುವುದಕ್ಕಿಂತಲೂ ಒಂದಿಲ್ಲಾ ಒಂದು ಕೆಲಸದಲ್ಲಿ ತೊಡಗಿರುತ್ತಾರೆ. ಚಿಕ್ಕಮಕ್ಕಳಿಗೆ ಬೇಕಾದಂತಹ ಗೊಂಬೆ, ಬುಗುರಿ, ಬ್ಯಾಟ, ಗಿಲ್ಲಿದಾಂಡ, ಪಿಂಗರಿ, ಬಿಲ್ಲೆ, ತೊಟ್ಟಿಲು, ಅಡಿಗೆಮಾಡಲು ಉಪಯೋಗಿಸುವ ಸೌಟು, ಗೋಟಣಿಗೆ ಹೀಗೆ ಹತ್ತು ಹಲವಾರು ರೀತಿಯ ಕಟ್ಟಿಗೆಯ ಸಾಮಾನುಗಳನ್ನು ಮಾಡಿದರೆ ಅದಕ್ಕೆ ಹೆಣ್ಣುಮಕ್ಕಳು ಅವುಗಳನ್ನು ಬಣ್ಣದಿಂದ ಅಲಂಕರಿಸಿ ಮಾರಾಟ ಮಾಡುವುದುಂಟು. ಸಂತೆ ಅಥವಾ ಪಟ್ಟಣಕ್ಕಿಂತಲೂ ಕಡಿಮೆ ಬೆಲೆಗೆ ಸಾಮಾನುಗಳು ತಮ್ಮ ಮನೆಯ ಬಾಗಿಲಲ್ಲೆ ಸಿಗುವುದರಿಂದ ಜನರು ಅವುಗಳನ್ನು ತುಂಬಾ ಸಂತೋಷವಾಗಿ ಕೊಂಡುಕೊಳ್ಳುತ್ತಾರೆ. ಕೆಲವೊಮ್ಮೆ ಮೊದಲೇ ದುಡ್ಡು ಕೊಟ್ಟು ತಮಗೆ ಬೇಕಾದ ಹಾಗೆ ಮಾಡಿಸುವುದು ಉಂಟು. ಇನ್ನೊಂದು ಇವರ ವಿಶೇಷವೇನೆಂದರೆ ಕೆಲವೊಂದು ವಸ್ತುಗಳ ಜಾಹೀರಾತು ಇವರೇ ಮಾಡುತ್ತಾರೆ. ಉದಾಹರಣೆಗೆ ರಾಮಾಯಣದ ನಾಟಕ ಮಾಡಿದರೆ ಅಲ್ಲಿರುವ ಮಕ್ಕಳು ರಾಮನಂತೆ ಬಿಲ್ಲು-ಬಾಣಗಳನ್ನು ಆಡಬೇಕು ಎಂಬ ಹಂಬಲದಿಂದ ಇವರೇ ತಯಾರಿಸಿರುವ ಬಿಲ್ಲು-ಬಾಣಗಳನ್ನು ಖರೀದಿಸುತ್ತಾರೆ. ಈ ರೀತಿಯಾಗಿ ಶ್ರಮಜೀವಿಗಳಾದ ಶಿಳ್ಳೇಕ್ಯಾತರು ತಮ್ಮ ಉಪಜೀವನಕ್ಕಾಗಿ ಒಂದಿಲ್ಲ ಒಂದು ವೃತ್ತಿಯಲ್ಲಿ ತೊಡಗಿರುತ್ತಾರೆ.

**ಗಿಡಮೂಲಿಕೆಗಳನ್ನು ಮಾರಾಟ ಮಾಡುವುದು:** ಗಿಡಮೂಲಿಕೆಗಳಲ್ಲಿ ಸಾಕಷ್ಟು ಅನುಭವವಿರುವ ಇವರು ಸಹಜವಾಗಿಯೇ ತಮ್ಮಲ್ಲಿ ಹಲವಾರು ರೀತಿಯ ಔಷಧಿಗಳನ್ನು ಯಾವಾಗಲೂ ಇವರ ಜೊತೆಯಲ್ಲಿಯೇ ಹೊತ್ತೊಯ್ಯುತ್ತಾರೆ. ಅಲ್ಲಿಗೆ ಹೋದಾಗ ಇವರೇ ಸ್ವತಃ ಮನೆಮನೆಗೆ ಹೋಗಿ ಅವರ ಔಷಧಿಗಳ ಬಗ್ಗೆ ಪರಿಚಯ ಮಾಡಿಕೊಡುತ್ತಾರೆ ಅಥವಾ ಅವರು ಅಲ್ಲಿಗೆ ಹೋದಾಗ ಯಾರಿಗಾದರೂ ಹಾವು - ಚೇಳು ಕಡಿದಿದ್ದರೆ ಅದನ್ನು ತಕ್ಷಣ ಕಡಿಮೆ ಮಾಡುತ್ತಾರೆ. ಇದನ್ನು ನೋಡಿದ ಜನರೇ ಸ್ವತಃ ಇವರ ಹತ್ತಿರ ತಮಗಿರುವ ಖಾಯಿಲೆಗಳನ್ನು ಹೇಳಿಕೊಂಡು ಅವರ ಔಷಧಿಗಳನ್ನು ಪಡೆದು ಗುಣಮುಖರಾಗುತ್ತಾರೆ. ಇದರಿಂದ ಅಲ್ಪಸ್ವಲ್ಪ ಹಣ ಹಾಗೂ ಊಟವನ್ನು ಸಂಭಾವನೆ ರೂಪದಲ್ಲಿ ಪಡೆಯುತ್ತಾರೆ. ಜನರು ಸಹ ಇವರ ಮೇಲೆ ಅಪಾರ ನಂಬಿಕೆಯನ್ನಿಟ್ಟು ಔಷಧಿಗಳನ್ನು ಪಡೆಯುತ್ತಾರೆ.

ಒಟ್ಟಾರೆಯಾಗಿ ಇವರ ಆರ್ಥಿಕ ಜೀವನದ ಬಗ್ಗೆ ಹೇಳುವುದಾದರೆ ಶಿಳ್ಳೇಕ್ಯಾತರು ತಮ್ಮ ಕುಲಕಸುಬನ್ನೇ ನಂಬಿಕೊಂಡು ಬದುಕುವವರಲ್ಲ. ಅವರು ತಮ್ಮ ಜೀವನವನ್ನು

ಸರಿಯಾದ ಹಾಗೂ ಉತ್ತಮವಾದ ರೀತಿಯಲ್ಲಿ ನಡೆಯಿಸಿಕೊಂಡು ಹೋಗಲು ಒಂದಲ್ಲ ಒಂದು ಒಳ್ಳೆಯ ಮಾರ್ಗವನ್ನು ಹುಡುಕಿಕೊಂಡು ಆ ರಾಮನ ಭಕ್ತರಂತೆ ಸದಾ ಸ್ವಚ್ಛಂದವಾಗಿ ಬದುಕುತ್ತಾರೆ. ಸಾಕಷ್ಟು ಊರನ್ನು ಸುತ್ತಿ ಯಾವ ಊರಲ್ಲಿ ಏನು ಸಿಗುತ್ತೆ, ಜನರಿಗೆ ಯಾವ ರೀತಿಯ ಅವಶ್ಯಕತೆ ಇದೆ ಎಂದು ಅರ್ಥಮಾಡಿಕೊಂಡು ಇವರು ರಾಮನ ಭಕ್ತ ಹನುಮಂತನಂತೆ ಜನರಿಗೆ ಬೇಕಾದ ವಸ್ತುವನ್ನು ದೊರಕಿಸಿಕೊಡುತ್ತಾರೆ. ಆದ್ದರಿಂದ ಅವರ ಜೀವನವನ್ನು ಸಾಗಿಸುತ್ತಾರೆ. ಹಾಗೆ ಅಲ್ಲಿ ನಿಸರ್ಗದತ್ತವಾಗಿ ದೊರೆಯುವ ವಸ್ತುಗಳನ್ನು ಬಳಸಿಕೊಂಡು ಅದನ್ನು ಜನರ ಮಟ್ಟಿಗೆ ತಲುಪಿಸಿ ಜನರು ಹಾಗೂ ಅವರು ಸಂತೋಷವಾಗಿರುತ್ತಾರೆ. ಈ ಮೇಲೆ ಕಾಣಿಸಿದ ಎಲ್ಲಾ ರೀತಿಯ ವೃತ್ತಿಗಳನ್ನು ಅವರು ಮಾಡಿದರೂ ಯಾವುದೇ ಪ್ರಯೋಜನವಿಲ್ಲ-ವೆಂದೆನಿಸುತ್ತದೆ. ಕಾರಣ ಅವರಿಗೆ ಒಂದು ಭದ್ರವಾದ ನೆಲೆಯಿಲ್ಲ. ಆದ್ದರಿಂದ ಏನೇ ಮಾಡಿದರೂ ಕೆಲವು ಸಂದರ್ಭದಲ್ಲಿ ವ್ಯರ್ಥವೆನಿಸುತ್ತದೆ. ಶಿಳ್ಳೇಕ್ಯಾತರಲ್ಲಿ ಕೇವಲ ಗಂಡಸರಷ್ಟೇ ಕೆಲಸ ಮಾಡುವುದಿಲ್ಲ. ಅವರಲ್ಲಿ ಹೆಣ್ಣುಮಕ್ಕಳು ಸಹ ಗಂಡಸರಿಗೆ ಸರಿಸಮಾನವಾದ ಕೆಲಸಗಳನ್ನು ಮಾಡಿ ಭುಜಕ್ಕೆ – ಭುಜಕೊಟ್ಟು ಗಂಡನಿಗೆ ತಕ್ಕ ಹೆಂಡತಿಯಾಗಿ ಅವನ ಕಷ್ಟಕ್ಕೆ ಸರಿಸಮನಾಗಿ ನಿಂತು ನಿಭಾಯಿಸುತ್ತಾಳೆ. ಸಾಮಾನ್ಯವಾಗಿ ಊರೂರು ಸುತ್ತುತ್ತಾ ಗಂಡನ ಜೊತೆಗೂಡಿ ಹೋದಾಗ ಅವಳು ಮಾಡುವ ಕೆಲಸಗಳನ್ನು ಈ ಕೆಳಗೆ ಪಟ್ಟಿ ಮಾಡಲಾಗಿದೆ.

- ಸೀರೆ ಕರಿಕಟ್ಟುವುದು.
- ಹೆಣ್ಣುಮಕ್ಕಳಿಗೆ ಸಂಬಂಧಿಸಿದ ಸೌಂದರ್ಯವರ್ಧಕ ಸಾಮಾನುಗಳನ್ನು ಮಾರಾಟ ಮಾಡುವುದು.
- ಚಾಪೆ, ಬುಟ್ಟಿ ಹಣೆಯುವುದು.
- ಕೌದಿ ಹೊಲೆಯುವುದು
- ಮಕ್ಕಳಿಗೆ ಸಂಬಂಧಿಸಿದ ಆಟಿಕೆಗಳನ್ನು ಮಾರಾಟ ಮಾಡುವುದು.
- ಪುಗ್ಗ-ಪಿನ್‌ಗಳನ್ನು ಮಾರಾಟಮಾಡಿ ಅಲ್ಲಿರುವ ಹೆಣ್ಣುಮಕ್ಕಳ ಕೂದಲುಗಳನ್ನು ತೆಗೆದುಕೊಳ್ಳುವುದು.
- ಕುರಿ, ಕೋಳಿಗಳನ್ನು ಸಾಕಾಣಿಕೆ ಮಾಡುವುದು.
- ಗಂಡಸರು ಹಿಡಿದಂತಹ ಬುರಲಿ, ಗೌಜುಗ, ಮೊಲಗಳನ್ನು ಮಾರಾಟಮಾಡುವುದು.
- ಕೆಲವೊಮ್ಮೆ ಬಾಂಡೆಗಳನ್ನು ಮಾರಾಟಮಾಡುವುದು.

ಹೀಗೆ ಇಲ್ಲಿ ಗಂಡು ಹೆಣ್ಣು ಇಬ್ಬರೂ ಒಡಗೂಡಿ ತೊಗಲುಗೊಂಬೆ ಆಟವಾಗಿರಬಹುದು. ಆ ಆಟಗಳನ್ನು ಆಡುವುದಾಗಿರಬಹುದು ಅಥವಾ ಊರಲ್ಲಿ ಗಾರೆ ಕೆಲಸಗಳನ್ನು ಮಾಡುವುದಾಗಿರಬಹುದು. ಎಲ್ಲದರಲ್ಲಿಯೂ ಅವರು ಒಂದುಗೂಡಿ ಕೆಲಸಮಾಡುತ್ತಾರೆ.

ಏಕಲವ್ಯ ನಗರದಲ್ಲಿ ವಾಸಮಾಡುವ ನಾಗರಿಕರು ತಮಗೆ ಮಾಡಲು ಸಾಧ್ಯವಾಗುವ ಎಲ್ಲಾ ಕಾರ್ಯಗಳನ್ನು ಮಾಡುತ್ತಾರೆ. ಇನ್ನು ತೊಗಲುಗೊಂಬೆ ಆಟ ಬಹಳಷ್ಟು ಜನರಿಗೆ ಬರುವುದಿಲ್ಲ. ಆದ್ದರಿಂದ ಇವರು ಒಂದು ಮೋಟಾರ್ ಸೈಕಲ್ ತೆಗೆದುಕೊಂಡು ಹೆಂಡತಿ ಮಕ್ಕಳೊಂದಿಗೆ ಸಂಚಾರ ಹೊರಡುತ್ತಾರೆ. ತಮ್ಮ ವಯಸ್ಸಾದ ತಂದೆ–ತಾಯಿಯನ್ನು ಬಿಟ್ಟುಹೋದರೆ ತಿಂಗಳಿಗೆ ಎರಡು ತಿಂಗಳಿಗೆ ಊರಿಗೆ ಬರುತ್ತಾರೆ. ಇಂದು ಇವರು ತೊಗಲುಗೊಂಬೆಯ ಆಟದ ಬದಲಾಗಿ ಸಿನಿಮಾಗಳನ್ನು ಮತ್ತು ಅದರ ಹಾಡುಗಳನ್ನು ಹೇಳಿಕೊಂಡು ಅದರಿಂದ ಬಂದಂತಹ ಹಣದಿಂದ ಜೀವನ ನಡೆಸುತ್ತಾರೆ. ಇನ್ನೂ ಕೆಲವರು ಸಣ್ಣಪುಟ್ಟ ಚಿಲ್ಲರೆ ಅಂಗಡಿಗಳನ್ನು ಹಾಕಿಕೊಂಡು ಅದರಿಂದ ಬರುವಂತಹ ಹಣದಿಂದ ಜೀವನ ಸಾಗಿಸುತ್ತಾರೆ. ಇನ್ನೂ ಕೆಲವು ಜನ ಊರಲ್ಲಿಯೇ ಇದ್ದು ಪಕ್ಕದಲ್ಲಿರುವ ಕೈಗಾರಿಕೆಗಳಲ್ಲಿ ಕೂಲಿ ಕೆಲಸ ಅಥವಾ ಗಾರೆ ಕೆಲಸವನ್ನು ಹುಡುಕಿಕೊಂಡು ಜೀವನ ನಡೆಸುತ್ತಾರೆ. ಇನ್ನೂ ವಯಸ್ಸಾದ ವೃದ್ಧರು ಪಟ್ಟಣದಲ್ಲಿ ಬಂದು ಹಾಡುಗಳನ್ನು ಹೇಳಿ ಅಥವಾ ದೇವರ ಹೆಸರಲ್ಲಿ ಭಿಕ್ಷೆಬೇಡಿ ಜೀವನವನ್ನು ಸಾಗಿಸುತ್ತಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಇವರ ತಮ್ಮ ದಿನನಿನತ್ಯದ ಜೀವನವನ್ನು ಸಣ್ಣ–ಪುಟ್ಟ ಕೆಲಸಮಾಡಿಯಾದರೂ ಆಗಲಿ ಅಥವಾ ಭಿಕ್ಷೆ ಬೇಡಿಯಾದರೂ ಸರಿ ಜೀವನ ನಡೆಸುತ್ತಾರೆ. ಹೀಗಾಗಿ ಆ ಮಕ್ಕಳ ಭವಿಷ್ಯಕ್ಕೆ ಇವರು ತಮ್ಮ ಈಗಿರುವ ಉದ್ಯೋಗ ಅಥವಾ ಕುಲ ಕಸುಬಿನಿಂದ ಭದ್ರಬುನಾದಿ ಹಾಕಲು ಸಾಧ್ಯವಿಲ್ಲ. ಅವರೇ ಆಸರೆಯಿಲ್ಲದೆ ಮಳೆ–ಚಳಿ ಎನ್ನದೆ ಆಕಾಶದ ಮಡಿಲಲ್ಲಿ ಜೀವಿಸಿ ಅರೆಬೆತ್ತಲೆ, ಅರೆ ಹೊಟ್ಟೆಯಲ್ಲಿರುವಾಗ ಇನ್ನೂ ಮುಂದಿನ ಪೀಳಿಗೆಗೆ..... ಈ ಬಗೆಗಿನ ಚಿಂತೆ ಅವರಲ್ಲಿ ಮನೆ ಮಾಡಿದೆ. ಸರಕಾರದಿಂದ ಸವಲತ್ತುಗಳು ಮಂಜೂರಾದರೂ ಅಧಿಕಾರಶಾಹಿ ನೀತಿಯಿಂದಾಗಿ ಅವುಗಳಲ್ಲಿ ಯಾವುವು ಅವರ ಕೈಗೆ ಸೇರುತ್ತಿಲ್ಲ. ಅವರು ದಿನನಿತ್ಯ ಊರಿಂದೂರಿಗೆ ಅಲೆಯುವುದು ತಪ್ಪುತ್ತಿಲ್ಲ. ಮಕ್ಕಳನ್ನು ಬಿಟ್ಟು, ತಾವೂ ಊರೂರು ಹೋಗುತ್ತಾರೆ. ಕೆಲವೊಮ್ಮೆ ಮಕ್ಕಳು ಹೊಟ್ಟೆಗಿಲ್ಲದೆ, ಚಳಿಯಿಂದ, ಮಳೆಯಿಂದ ಸಾಕಷ್ಟು ಅನಾಹುತುಗಳಿಗೆ ತುತ್ತಾಗುವುದುಂಟು. ಅಪೌಷ್ಠಿಕ ಆಹಾರದಿಂದ ಎಷ್ಟೋ ಮಕ್ಕಳು

ತಂದೆ-ತಾಯಿ ಬರುವುದಕ್ಕಿಂತ ಮುಂಚೆ ಕಣ್ಣುಮುಚ್ಚಿದ ಸಾಕಷ್ಟು ಉದಾಹರಣೆಗಳಿವೆ. ಹೀಗಿರುವುದರಿಂದ ತಂದೆ-ತಾಯಿ ಮಕ್ಕಳ ಭವಿಷ್ಯ ನೋಡಬೇಕಾ? ಅಥವಾ ದಿನನಿತ್ಯದ ಜೀವನುಪಾಯ? ಇವೆರೆಡರ ಮಧ್ಯೆ ಗೊಂದಲಾಟದಲ್ಲಿ ದಿನಾ ಸಾವು-ಬದುಕಿನ ಮಧ್ಯೆ ಒಂದು ಹೊತ್ತಿನ ಅನ್ನಕ್ಕಾಗಿ ಅಲೆದಾಡುವುದೇ ಇವರ ಜೀವನಕ್ರಮವಾಗಿದೆ.

**ಕಸುಬಿನ ಬಗ್ಗೆಯಿರುವ ನಂಬಿಕೆಗಳು:** ಕುಲಕಸುಬಾದ ತೊಗಲುಗೊಂಬೆಯಾಟ ಅಥವಾ ದೈವ ಭಿಕ್ಷಾಟನೆ ಇದು ಶ್ರೀರಾಮನಿಂದ ಬಂದಂತಹ ಒಂದು ವರದಾನ. ಶಿಳ್ಳೇಕ್ಯಾತರೆ ಹೇಳುವಂತೆ ಅವನೇ ಸ್ವತಃ ಇವರ ಜೀವನುಪಾಯಕ್ಕಾಗಿ ಈ ತೊಗಲುಗೊಂಬೆಯಾಟ-ವನ್ನು ದಯಪಾಲಿಸಿರುವುದರಿಂದ ಇದನ್ನು ಬಿಡಲು ಯಾರೂ ಮನಸ್ಸು ಮಾಡುವುದಿಲ್ಲ ಮತ್ತು ಮಾಡಿಲ್ಲ. ಇನ್ನೂ ಕೆಲವರು ಅಲ್ಪಸ್ವಲ್ಪ ಓದಿದಂತಹ ವಿದ್ಯಾವಂತ ಯುವಕರು ಮನಸ್ಸು ಮಾಡಿ ಬೇರೆ ಸಣ್ಣಪುಟ್ಟ ಕೆಲಸ ಮಾಡುತ್ತಿದ್ದಾರೆ. ಆದರೆ ಅವರಿಗೆ ಈ ಗಳಿಕೆ ಸಾಕಾಗುತ್ತಿಲ್ಲ. ಅವರು ಯಾವುದೇ ಒಂದು ಕಾರಣದಿಂದ ಕೆಲವೊಂದು ಜ್ವರ, ಕೆಮ್ಮು, ದುರ್ಘಟನೆಯಾದಾಗ ಅದನ್ನು ದೇವರ ಶಾಪ, ನಮ್ಮ ಕುಲಕಸುಬನ್ನು ಬಿಟ್ಟಿರುವುದರಿಂದ ಅವನಿಗೆ ಈ ರೀತಿಯಾದ ಅನಾಹುತಗಳಾಗುತ್ತವೆ ಎಂಬುದು, ದೇವರ/ದೇವಿಯ ಶಾಪ ಈ ರೀತಿಯ ಗೊಡ್ಡು-ಮೂಢ ನಂಬಿಕೆ ಇವತ್ತಿಗೂ ಇರುವುದರಿಂದ ಅವರು ತಮ್ಮ ಕಸುಬನ್ನು ಬಿಟ್ಟು ಈ ಹೊಸ ಪ್ರಪಂಚಕ್ಕೆ ಬದಲಾಗುತ್ತಿಲ್ಲ. ಕಡುಬಡತನದಲ್ಲಿ ಇವರು ಬದುಕುವುದರಿಂದ ಮಕ್ಕಳಿಗೆ ಸಂಪೂರ್ಣವಾದ ಒಂದು ವಿದ್ಯೆ ಕೊಡಲಾಗುತ್ತಿಲ್ಲ. ಆ ಮಗು ಮುಂದೆ ಬೆಳೆದು ದೊಡ್ಡವನಾಗುವಾಗ ಅವನಿಗೆ ಮದುವೆ ಮಾಡಿ ಸಂಸಾರದ ಭಾರ ಅವನ ತಲೆಯ ಮೇಲೆ ಹಾಕುವುದರಿಂದ ಅವನು ಬೇರೆ ಗತಿಯಿಲ್ಲದೆ ತನ್ನ ತಂದೆಯ ಉದ್ಯೋಗನ್ನೇ ಮುಂದುವರೆಸಿಕೊಂಡು ಬರುತ್ತಾನೆ.

ಹೀಗಾಗಿ ಇವರು ತಮ್ಮ ಕಸುಬು ಜಾತಿಯ ಬೇರನ್ನು ಬಿಟ್ಟು ಹೊರಬರಲಾಗುತ್ತಿಲ್ಲ. ಅದೇ ಚಕ್ರವ್ಯೂಹದಲ್ಲಿ ಹುಟ್ಟಿ ಧರ್ಮ, ಜಾತಿ, ಕುಲ ಎಂದು ಅಲ್ಲಿಯೇ ಸಿಲುಕಿ ಸಾಯುತ್ತಿದ್ದಾರೆ. ಇದರಿಂದ ಹೊರಬರಲು ಕೆಲವೊಂದು ಯುವಕರು ಸಂಘಟನೆಗಳನ್ನು ಮಾಡಿಕೊಂಡು ಸರಕಾರದಿಂದ ಸವಲತ್ತುಗಳನ್ನು ಪಡೆಯುತ್ತಿದ್ದಾರೆ. ಹಾಗೆ ಕೆಲವೊಂದು ಸಂಘ-ಸಂಸ್ಥೆಗಳು ಮುಂದೆ ಬಂದು ಅಲ್ಲಿಯ ಮಕ್ಕಳಿಗೆ ಶಿಕ್ಷಣ ಹಾಗೂ ಆರೋಗ್ಯದ ಬಗ್ಗೆ ಸಹಾಯ ಹಸ್ತ ತೋರಿದ್ದಾರೆ. ಆದರೂ ಈ ಜನರಲ್ಲಿರುವ ವಯಸ್ಸಾದ ವೃದ್ಧರು ಇನ್ನೂ ಜಾತಿಯ ಅಂಧಕಾರದಲ್ಲಿ ಯುವಕರನ್ನು ತಳ್ಳುತ್ತಿದ್ದಾರೆ. ಹೀಗಿರುವುದರಿಂದ ಇವರಿಗೆ ವಂಶವಾಹಿನಿಯಾಗಿ

ಬಂದಿರುವಂತಹ ಈ ಕಸುಬು ಮತ್ತು ಅವರ ಜಾತಿಗಿರುವ/ಜನಾಂಗಕ್ಕಿರುವ ಇತಿಹಾಸದ ಹಿನ್ನೆಲೆಯನ್ನು ತ್ಯಜಿಸಿ ಹೊರಬರಲು ಊರ ಹೊರಗಿರುವ ಕರಿಯಲ್ಲಮ್ಮ ಅವರನ್ನು ಬಿಡುತ್ತಿಲ್ಲ. ಹೀಗಾಗಿ ಅವರ ಆರ್ಥಿಕ ಜೀವನ ಹತ್ತು ವರ್ಷಗಳ ಹಿಂದೆ ಹೇಗಿತ್ತೋ ಇಂದು ಹಾಗೆಯೇ ಇದೆ. ಇನ್ನು ಅವರ ಜಾತಿ, ಕಸುಬಿನ ಬಗ್ಗೆಯಿರುವ ನಂಬಿಕೆಯು ಚೀನಾ ಗೋಡೆಯಂತೆ ತುಂಬಾ ಭದ್ರವಾಗಿದೆ.

**ಉಡುಗೆ-ತೊಡುಗೆ:** ಶಿಳ್ಳೇಕ್ಯಾತರ ವೇಷ-ಭೂಷಣದ ಬಗ್ಗೆ ಮಾತನಾಡುವುದಾದರೇ ಸಾಂಪ್ರದಾಯಿಕವಾಗಿ ಅವರಿಗೆ ಒಂದು ಲಂಗೋಟಿ ಹಾಗೂ ಕರಿ ಕಂಬಳಿ ಇಷ್ಟೇ ಅವರ ಉಡುಪು. ಆದರೆ ಅದನ್ನು ಬಿಟ್ಟು ಹಳ್ಳಿ-ನಗರಕ್ಕೆ ಬಂದಿರುವುದರಿಂದ ಯಾವ್ಯಾವ ಊರಿಗೆ ಹೋಗುತ್ತಾರೆಯೋ ಆ ಊರಿನ ವೇಷ-ಭೂಷಣ ಅವರದಾಗಿರುತ್ತದೆ. ಕಾರಣ ಆ ಊರಿನ ಜನ ಅವರಿಗಾಗಿ ಕೊಟ್ಟ ಹಳೆಯ ಬಟ್ಟೆಗಳನ್ನು ಹಾಕಿಕೊಂಡಿರುತ್ತಾರೆ. ಹೀಗಿರುವುದರಿಂದ ಇವರ ವೇಷಭೂಷಣದಲ್ಲೇನೋ ಅವರದ್ದೇ ಎಂಬ ವಿಶೇಷತೆಯಿಲ್ಲ. ಸಾಮಾನ್ಯವಾದಂತಹ ಬಟ್ಟೆಗಳನ್ನೇ ಅವರು ಧರಿಸುತ್ತಾರೆ.

## ಅಧ್ಯಾಯ ಐದು

# ಭಾಷೆ ಮತ್ತು ಸಾಹಿತ್ಯ

ಭಾಷೆ ಒಂದು ಮಾಧ್ಯಮ. ಮನುಷ್ಯರು ತಮ್ಮ ದೈನಂದಿನ ಬದುಕಿಗೆ ಸೃಷ್ಟಿಸಿ-ಕೊಂಡಿರುವ ಸಂಪರ್ಕಸಾಧನ. ಏನನ್ನಾದರೂ ವ್ಯಕ್ತಪಡಿಸಬೇಕೆಂಬ ಆಸೆ ಮಾನವನಲ್ಲಿ ಉಂಟಾದಾಗ ಬಾಯಿಂದ ಹೊರಬಿದ್ದ ಶಬ್ದವು ಗಾಳಿಯಲ್ಲಿ ಪ್ರವಹಿಸಿ ಕೇಳುಗನ ಕಿವಿಯ ತಮಟೆಯ ಮೇಲೆ ಬಿದ್ದು ಜ್ಞಾನವಾಹಿನಿಗಳ ಮೂಲಕ ನೆನಪಿನ ಕೋಶಕ್ಕೆ ತಾಗಿ ಕೇಳುಗನಲ್ಲಿ ಪ್ರತಿಕ್ರಿಯೆ ಉಂಟುಮಾಡಲು ಕಾರಣವಾಗುವುದೇ ಭಾಷೆ. ಮನುಷ್ಯನಿಗೆ ಪ್ರಕಾಶತೆಯ ಕಳಸವನ್ನು ಇಟ್ಟು ತನ್ನ ಸುತ್ತಡೆಗೂ ಬೆಳಗುವಂತೆ ಮಾಡಿದ ಮಾಧ್ಯಮವೆಂದರೆ ಭಾಷೆ. ಮಾನವನ ಭಾವ ಪೋಷಣೆಗೆ ಅಗಾಧವಾದ ಚಿನ್ನಾಭರಣವಾಗಿ, ಅನಂತವಾದ ಬೆಲೆಯುಳ್ಳ ಆಸ್ತಿಯಾಗಿ ಇವನ ಭಾವನೆಗಳಿಗೆ ಜೊನ್ನದೀಪದಾರತಿಯ ಮಾಧ್ಯಮವಾಗಿರುವುದೇ ಭಾಷೆ.

ಈ ಪೃಥ್ವಿಯ ಮೇಲೆ ಮಾನವನ ಎಲ್ಲಾ ಸಾಹಸ ಸಿದ್ಧಿಯನ್ನು ಸಾರುವ ಸಂಪರ್ಕ ವಿಜಯ ವೈಜಯಂತಿಯೇ ಭಾಷೆ ಎಂದು ಹೇಳಬಹುದು. ಐಸ್ಲರ್‌ರವರು ಹೇಳುವಂತೆ "ಮನಸ್ಸಿನಲ್ಲಿರುವ ಯಾವುದೇ ಪ್ರಾಣಿಯ ಅನುಭವಗಳ ಅಭಿವ್ಯಕ್ತಿಯೇ ಭಾಷೆ". ಧ್ವನಿ ಸಂಕೇತಗಳ ಮೂಲಕ ಮತ್ತು ಭಾವನೆಗಳ ಮೂಲಕ ವ್ಯಕ್ತಪಡಿಸುವಂತಹ ಅನುಭವಗಳು ಮತ್ತು ನಿಖರವಾದ ಸಾಧನೆಯನ್ನು ಭಾಷೆ ಎನ್ನುವರು. ಇದೇ ರೀತಿ ಎರ್ಡ್‌ಮನ್‌ರವರು ತಿಳಿಸುವಂತೆ ಭಾಷೆ ಎಂಬುದೊಂದು ರೀತಿಯ ಸಾಧನ. ಅದು ಮನುಷ್ಯನ ವಿಶಿಷ್ಟ ಆಲೋಚನೆಗಳಿಗೆ ನೆರವಾಗುವ ಅಂಗ ಎಂದಿದ್ದಾರೆ.

ಪ್ಲೇಟೋರವರು ಮೊಟ್ಟಮೊದಲಿಗೆ ಭಾಷೆಯನ್ನು ಕುರಿತು ಚರ್ಚಿಸಿದಾಗ "ಇದೊಂದು ಧ್ವನಿ ಸಂಕೇತಗಳಿಂದ ಮನುಷ್ಯನ ವಿಚಾರಗಳನ್ನು ಅಭಿವ್ಯಕ್ತಿಗೊಳಿಸು-ವಂತಹ ಸಾಧನವೇ ಭಾಷೆ ಎಂದು ಅಭಿಪ್ರಾಯ ಪಟ್ಟಿದ್ದಾರೆ." ಒಟ್ಟಾರೆಯಾಗಿ ಹೇಳುವುದಾದರೆ ಭಾಷೆ ಒಂದು ಸಾಧನ, ಮಾಧ್ಯಮ ತನ್ನದೇ ಆದ ವಿಶಿಷ್ಟ ಕ್ರಮವನ್ನು ಪಡೆದಿರುತ್ತದೆ. ಒಬ್ಬ ವ್ಯಕ್ತಿ ಇನ್ನೊಬ್ಬ ವ್ಯಕ್ತಿಗೆ ತುಂಬಾ ಸರಳವಾಗಿ ಹಾಗೂ ಸ್ಪಷ್ಟವಾಗಿ ತಿಳಿಸುವಂತಹದ್ದು. ಇನ್ನೂ ಭಾಷೆಯಿಂದಲೇ ಉಳಿದಂತಹ ಮಾಧ್ಯಮಗಳು ಹುಟ್ಟಿಕೊಂಡಿವೆ. ಭಾಷೆಯಿಂದಲೇ ಸಾಹಿತ್ಯ ಹುಟ್ಟಿಕೊಂಡು ಇದೊಂದು ಲಿಖಿತ ಪ್ರಪಂಚಕ್ಕೆ ಉತ್ತಮವಾದಂತಹ ಕೊಡುಗೆಯಾಗಿ ಪರಿಣಮಿಸಿದೆ.

ಸಾಹಿತ್ಯ ಎಂದರೆ– "ಸ–ಹಿತವಾದದ್ದು" ಎಂದರೆ ಸಹಿಸಲು ಹಿತವಾದದ್ದು, ಐದನೆಯ ಶತಮಾನದ ಹಲ್ಮಿಡಿ ಶಾಸನ ಕಾಲದಿಂದ ಕನ್ನಡ ಸಾಹಿತ್ಯಾಕಾರದಲ್ಲಿ ಸೂರ್ಯ ಬಿಂಬವು ಕಾಣತೊಡಗಿತು. ಕನ್ನಡ ವಾಙ್ಮಯವು ಕ್ರಮೇಣ ಗ್ರಂಥಸ್ಥವಾಗುವುದಕ್ಕೆ ಶಾಸನಗಳೇ ಬಹುಮಟ್ಟಿಗೆ ಕಾರಣವಾದವು. ಈ ಆರಂಭ ಕಾಲದಲ್ಲಿ ಸಾಹಿತ್ಯ ರಚನೆ ಮಾಡಿದ ಪ್ರಮುಖರೆಂದರೆ ಕಾವ್ಯಟೀಕಾಕಾರರು ಹುಟ್ಟಿಕೊಂಡರು. ನಂತರ ಕನ್ನಡ ಸಾಹಿತ್ಯ ಉಜ್ವಲವಾಗಿ ಬೆಳೆಯಿತು. ಕಥೆ, ಕಾದಂಬರಿ ಸಣ್ಣಕಥೆ, ಪ್ರಗಾಥ ಕಾವ್ಯ– ಹೀಗೆ ವಿಶಿಷ್ಟ ಪ್ರಬೇಧಗಳಲ್ಲಿ ವೈವಿದ್ಯಮಯವಾಗಿ ಸಾಹಿತ್ಯ ಬೆಳೆಯುತ್ತಾ ಬಂತು. ನಂತರ ಪಾಶ್ಚಾತ್ಯರ ಪ್ರಭಾವದಿಂದ ಅದು ತನ್ನ ಹರಹನ್ನು ಇನ್ನಷ್ಟು ಹೆಚ್ಚಿಸಿಕೊಂಡಿತು. ಹೀಗೆ ಅದು ತನ್ನನ್ನೂ ತಾನು ಬಲಪಡಿಸಿಕೊಳ್ಳುತ್ತಾ ಹೊಸ ಸಂಪ್ರದಾಯಗಳಿಗೆ ಮಾರ್ಗ ತೋರುತ್ತಾ ಸಾಗುತ್ತಿದೆ. ಈ ರೀತಿಯಾಗಿ ಸಾಹಿತ್ಯ ಎನ್ನುವುದು ಎಲ್ಲರನ್ನೂ ಎಲ್ಲಾ ಕಾಲದಲ್ಲಿಯೂ ಯಾವುದು ಸಂತೋಷಗೊಳಿಸುವುದೋ ಅಂತಹ ಉದಾತ್ತವಾದ ಭಾವವೇ ಸಾಹಿತ್ಯ.

**ಭಾಷೆಯ ನೆಲೆಯಿಂದ ಸಾಹಿತ್ಯ ವಿವೇಚನೆ:** ಭಾಷೆಗೂ ಮತ್ತು ಸಾಹಿತ್ಯಕ್ಕೂ ನಿಕಟವಾದ ಸಂಬಂಧವಿದೆ. ಭಾಷೆಯಿಲ್ಲದೆ ಸಾಹಿತ್ಯರಚನೆ ಅಸಾಧ್ಯ. ಕವಿಯ ಅಥವಾ ಸಾಹಿತಿಯ ಕೆಲಸ ನಡೆಯುವುದು ಮತ್ತು ರೂಪುಗೊಳ್ಳುವುದು ಭಾಷೆಯಲ್ಲಿ ತನ್ನ ವಿಶಿಷ್ಟವಾದ ಒಂದು ಭಾವವನ್ನೋ, ಅನುಭವವನ್ನೋ ಆಧರಿಸಿಕೊಂಡು ಅದಕ್ಕೆ ತಕ್ಕ ವಿಶಿಷ್ಟವಾದ ರೂಪವನ್ನು ಅವನು ಭಾಷೆಯಲ್ಲಿ ಹುಡುಕುತ್ತಾನೆ. ಭಾಷೆ ಕವಿಯ ಅಂತರಂಗದ ಒಳಗಡೆ ಹೇಗೋ ಹಾಗೆಯೇ ಹೊರಗಡೆಯೂ ಇರತಕ್ಕಂತಹದ್ದು ಎಂದು ತಿಳಿಯುತ್ತದೆ.

ಸಾಹಿತ್ಯದಲ್ಲಿ ಎರಡು ವಿಧಗಳನ್ನು ಕಾಣಬಹುದು ಒಂದು ಅಲಿಖಿತವಾದ, ಮೌಖಿಕವಾದ ಹಾಗೂ ಇನ್ನೊಂದು ಜನಪದ ಸಾಹಿತ್ಯ ಇನ್ನೂ ಇದನ್ನು ಬಿಟ್ಟರೆ ಲಿಖಿತವಾದಂತಹ ಸಾಹಿತ್ಯ. ಅಲಿಖಿತ ಸಾಹಿತ್ಯಕ್ಕೆ ಸಾಮಾನ್ಯವಾಗಿ ಆಡುಭಾಷೆಯೇ ಮುಖ್ಯವಾಗಿರುತ್ತದೆ. ಹಿಂದೆ ಈ ಸಾಹಿತ್ಯವನ್ನು ಕಡೆಗಾಣಿಸಲಾಯಿತು. ಏಕೆಂದರೆ ಇದು ಜನರ ಆಡುಭಾಷೆಯಲ್ಲಿದ್ದರಿಂದಲೋ ಏನೋ? ಆದರೆ ಭಾಷೆ ಅಧ್ಯಯನದ ದೃಷ್ಟಿಯಿಂದ ಇಂದು ಆಡುಭಾಷೆಯೇ ಮುಖ್ಯವಾಗಿದೆ. ಇಂದು ಅಧ್ಯಯನಗಳು ನಡೆಯುತ್ತಿರುವುದು ಆಡುಭಾಷೆಯ ಮೇಲೆಯೇ ಹೊರತು ಗ್ರಂಥಸ್ಥ ಭಾಷೆಯನ್ನು ಕುರಿತು ಅಲ್ಲ. ಇನ್ನೂ ಅಲಿಖಿತ ಸಾಹಿತ್ಯದಲ್ಲಿ ಗೀತೆ, ಹಾಡು, ಪದ, ಕತೆ, ಲಾವಣಿ, ಗಾದೆ, ಒಗಟುಗಳು, ಒಡಪುಗಳು ಮುಂತಾದ ಪ್ರಕಾರಗಳು ಕಂಡುಬರುತ್ತವೆ. ಒಂದು ಪ್ರಕಾರದ ಸಾಹಿತ್ಯಕ್ಕಿಂತ ಇನ್ನೊಂದು ಪ್ರಕಾರದ ಸಾಹಿತ್ಯಕ್ಕೆ ಭಾಷೆ ಬೇರೆ ಬೇರೆ ರೂಪ

ತಾಳುತ್ತದೆ. ಅದೇ ರೀತಿ ಒಂದೊಂದು ಭಾಷೆಯಲ್ಲಿಯೂ ಅದು ಬೇರೆ ಬೇರೆಯಾಗಿರುತ್ತದೆ. ಸಾಮಾನ್ಯವಾಗಿ ಜನಪದ ಗೀತೆ ಹಾಸು, ಪದ, ಲಾವಣಿಗಳಲ್ಲಿ ಗೇಯತೆ ಇರುತ್ತದೆ. ಲಯ ಮತ್ತು ಛಂದೋಬದ್ಧತೆ ತಿಳಿಯದಂತೆ ಸಮೀಕರಿಸಿರುತ್ತದೆ. ಇಂತಹ ಸಾಹಿತ್ಯ ಪ್ರಕಾರಗಳು ಆಯಾಪ್ರದೇಶದ ಜನರ ಆಡುಭಾಷೆಯ ಸ್ವರೂಪವನ್ನು ತಿಳಿಸುತ್ತವೆ. ಜನಪದ ಕತೆಗಳಲ್ಲಿ ಪ್ರಾದೇಶಿಕ ಭಾಷೆಯ ಮಹತ್ವದ ಅರಿವು ಗೊತ್ತಾಗುತ್ತದೆ. ಮೌಖಿಕ ಗಾದೆಗಳು, ಒಗಟುಗಳು ಒಂದು ಭಾಷಾ ಸ್ವರೂಪವನ್ನು ಮತ್ತು ಆ ಭಾಷೆಯನ್ನು ಶ್ರೀಮಂತಗೊಳಿಸುತ್ತದೆ.

ಜನಪದ ಸಾಹಿತ್ಯದ ಜ್ಞಾನ ಒಬ್ಬ ವ್ಯಕ್ತಿಯದಲ್ಲ. ಅದು ಇಡೀ ಸಮುದಾಯದ ಅಭಿವ್ಯಕ್ತಿಯಾಗಿರುತ್ತದೆ. ಇದರ ವಿಶಿಷ್ಟ ಭಾಷಿಕ ಲಕ್ಷಣವೆಂದರೆ ಇದು ಕಾಲದಿಂದ ಕಾಲಕ್ಕೆ ವರ್ಗಾವಣೆಯಾಗುತ್ತದೆ. ಹೀಗೆ ಜನಪದ ಸಾಹಿತ್ಯದಲ್ಲಿ ಭಾಷೆ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಅಲ್ಲಿ ಭಾಷೆಯ ರಚನೆಯ ಬಗ್ಗೆ ಮಾಹಿತಿ ಅಲಭ್ಯವಾದರೂ ವಿವಿಧ ಪ್ರಕಾರಗಳನ್ನು ಅಧ್ಯಯನ ಮಾಡುವುದರಿಂದ ಆ ಜನರ ಆಡು ಭಾಷೆಯನ್ನು ತಿಳಿಯಬಹುದು.

**ಪದ್ಯ ಸಾಹಿತ್ಯ ಮತ್ತು ಭಾಷೆ:** ಪದ್ಯ ಸಾಹಿತ್ಯದಲ್ಲಿ ಬಳಕೆಯಾಗಿರುವ ಭಾಷೆಯನ್ನು ಕಾವ್ಯ ಭಾಷೆ ಎಂದು ಕರೆಯುವರು. ಇಲ್ಲಿ ಅಲಂಕಾರಗಳು ಮತ್ತು ಛಂದೋನಿಯಮಗಳು ಮುಖ್ಯವೆನಿಸುತ್ತವೆ. ಇವು ಪದ್ಯಸಾಹಿತ್ಯವನ್ನು ಗದ್ಯ ಸಾಹಿತ್ಯದಿಂದ ಬೇರೆ ಮಾಡಿವೆ. ಪದ್ಯಸಾಹಿತ್ಯದಲ್ಲಿ ತ್ರಿಪದಿ, ಚೌಪದಿ, ರಗಳೆ, ಷಟ್ಪದಿ, ದೋಹ, ಗಜಲ್ ಭಾವಗೀತೆ ಮುಂತಾದ ಪ್ರಕಾರಗಳಲ್ಲಿ ಮುಖ್ಯ ಎನಿಸುತ್ತವೆ. ಹಳೆಗನ್ನಡ, ನಡುಗನ್ನಡ, ಪ್ರಕಾರಗಳಾದ ತ್ರಿಪದಿ, ಚೌಪದಿ, ರಗಳೆ, ಷಟ್ಪದಿ, ಗಜಲ್ ಮುಂತಾದವುಗಳಿಗೆ ಛಂದೋನಿಯಮ, ಲಯ, ತಾಳ ಮುಖ್ಯ ಎನಿಸುತ್ತವೆ. ಇಲ್ಲಿಯ ಭಾಷೆಯಲ್ಲಿ ಪಾಂಡಿತ್ಯ, ಪ್ರೌಢಿಮೆ ಶಾಸ್ತ್ರೀಯ ಜ್ಞಾನ ಸ್ಪಷ್ಟವಾಗಿ ಗೋಚರವಾಗುತ್ತವೆ. ಇಲ್ಲಿ ಭಾಷೆ ಶುದ್ಧ ಗ್ರಾಂಥಿಕ ಭಾಷೆಯಾಗಿದ್ದು ಪಂಡಿತರು ಓದುಗ ವರ್ಗದವರಿಗೆ ಮಾತ್ರ ಅನುಕೂಲ ಮತ್ತು ಅರ್ಥವಾಗುವಂಥದ್ದಾಗಿರುತ್ತದೆ.

ಇನ್ನೂ ಜನಪದ ಸಾಹಿತ್ಯವನ್ನು ತೆಗೆದುಕೊಂಡಿದ್ದೇ ಆದರೆ ಅದು ವ್ಯಕ್ತಿಯ ಅನುಭವ ಮತ್ತು ಅವನ ಅಂತರಾಳದಿಂದ ಹೊರಬಂದು ವ್ಯಕ್ತಿಯ ಮತ್ತು ಸಮಾಜದಲ್ಲಿ ದಿನನಿತ್ಯ ನಡೆಯುವ ಘಟನೆಗಳನ್ನಾಧರಿಸಿ ಹೊರಬರುವಂತಹ ಸಾಹಿತ್ಯವಾಗಿರುತ್ತದೆ. ಜನಪದ ಸಾಹಿತ್ಯ ಎಂದರೆ ಪದ್ಯ ಸಾಹಿತ್ಯ. ವ್ಯಕ್ತಿಯಲ್ಲಿ ನಡೆಯುವ ತುಮುಲಗಳ

ಒಂದು ಚಿತ್ರಣವಾಗಿರುತ್ತದೆ. ಆ ನೋವು, ಮಿಡಿತ, ಕಹಿಘಟನೆಗಳು, ಸಂತೋಷ ಎಲ್ಲವೂ ಆ ಪದ್ಯ ಸಾಹಿತ್ಯದಲ್ಲಿ ಅಡಗಿರುತ್ತದೆ.

ಈ ಒಂದು ಅಧ್ಯಯನದಲ್ಲಿ ಶಿಳ್ಳೇಕ್ಯಾತರ ಭಾಷೆ, ಅವರ ಸಾಹಿತ್ಯ ಎಲ್ಲವು ಹಿಡಿದಿಡುವ ಪ್ರಯತ್ನ ಮಾಡಲಾಗಿದೆ. ಶಿಳ್ಳೇಕ್ಯಾತರು ರಚಿಸಿರುವಂತಹ ಸಾಹಿತ್ಯ ಇಲ್ಲ, ಆದರೆ ಮೌಖಿಕ ರೂಪದಲ್ಲಿ ತಲೆಮಾರಿನಿಂದ ಬಳುವಳಿಯಾಗಿ ಬಂದಂತಹ ಪದ್ಯ, ಗದ್ಯ, ನಾಟಕ, ಬಯಲಾಟಗಳಾಧ ಸಣ್ಣಾಟ, ದೊಡ್ಡಾಟ, ಒಗಟುಗಳು, ಒಡಪುಗಳು ಈ ಒಂದು ಅಧ್ಯಯನದಲ್ಲಿ ಸ್ವಲ್ಪಮಟ್ಟಿಗೆ ಹಿಡಿದಿಡುವ ಪ್ರಯತ್ನ ಮಾಡಲಾಗಿದೆ.

**ಪಠ್ಯ ಪರಂಪರೆ:** ಶಿಳ್ಳೇಕ್ಯಾತರು ತಮ್ಮ ದಿನ ನಿತ್ಯದ ಜೀವನವನ್ನು ನಡೆಯಿಸುವುದೇ ಅವರಲ್ಲಿರುವ ಅಮೋಘವಾದ ಜನಪದ ಕಲೆ ಮತ್ತು ಸಾಹಿತ್ಯದಿಂದ. ಅವರಲ್ಲಿರುವ ಆ ಕಲೆಯೇ ಅವರ ಉದ್ಯೋಗ ಮತ್ತು ಅನ್ನದಾತ. ಹೀಗಿರುವಾಗ ಅವರು ಪರಂಪರಾಗತವಾಗಿ ಬಂದಂತಹ ಸಾಹಿತ್ಯ ಮತ್ತು ತಮ್ಮ ಜನಪದ ಕಲೆಗಳು ಹಾಗೆ ಮುಂದುವರಿಸುತ್ತಾ ಬಂದಿದ್ದಾರೆ. ಅವರ ಕುಲಕಸುಬು ತೊಗಲುಗೊಂಬೆಯಾಟವನ್ನು ಅವರು ಜನರೆದುರು ಪ್ರದರ್ಶನ ಮಾಡಬೇಕಾದರೆ ಅವರು ತಮ್ಮದೇ ಆದಂತಹ ಪಠ್ಯಕ್ರಮವನ್ನು ರಚಿಸಿಕೊಂಡು ಅದರಂತೆ ಅವರು ಗೊಂಬೆಗಾಳ ಆಟವನ್ನು ಪ್ರದರ್ಶಿಸುತ್ತಾರೆ. ರಾಮಾಯಣ ಮಹಾಭಾರತ ಹಾಗೂ ಪುರಾಣಗಳ ಕಥೆಗಳನ್ನು ಆಧಾರವಾಗಿಟ್ಟುಕೊಂಡು ತಮ್ಮದೇ ಆದ ಶೈಲಿಯಲ್ಲಿ ಸಾಮಾಜಿಕ ಹಿತದೃಷ್ಟಿಯಿಂದ ಅವರು ಆ ಕಥೆಗಳನ್ನು ರಚಿಸಿಕೊಂಡು ಗೊಂಬೆಗಳ ಮುಖಾಂತರ ಆ ಕಥೆಯನ್ನು ನಡೆಯಿಸಿಕೊಡುತ್ತಾರೆ ಹಾಗೂ ಜನರನ್ನು ರಂಜಿಸುತ್ತಾರೆ. ಆ ಕಥೆಗಳಲ್ಲಿ ಆಟಗಳಲ್ಲಿ ಹಾಸ್ಯ, ಸಾಮಾಜಿಕ ನೀತಿ, ದುಃಖಕರವಾದ ಸನ್ನಿವೇಶ ಹೀಗೆ ನವರಸಗಳನ್ನು ತುಂಬಿ ಜನರನ್ನು ರಂಜಿಸುತ್ತಾರೆ.

**ರಾಮಾಯಣದ ಕಥೆ:** ಇಡೀ ರಾಮಾಯಣವನ್ನು ಶಿಳ್ಳೇಕ್ಯಾತರು ತಮ್ಮ ತೊಗಲುಗೊಂಬೆಯಾಟದಲ್ಲಿ ಒಂದರಿಂದ ಎರಡು ತಾಸುಗಳಲ್ಲಿ ಮುಗಿಸುವಂತಹ ಕಲೆಯನ್ನು ರೂಢಿಸಿಕೊಂಡಿರುತ್ತಾರೆ. ರಾಮ, ಸೀತೆ, ಲಕ್ಷ್ಮಣ ಹಾಗೂ ಹನುಮಂತನನ್ನು ಹಿಡಿದುಕೊಂಡು ರಾಮಾಯಣದ ಮೂಲವನ್ನು ಅದರಲ್ಲಿರುವ ಲಕ್ಷ್ಮಣನ ಅಣ್ಣನ ಭ್ರಾತೃತ್ವ ಅತ್ತಿಗೆಯನ್ನು ತಾಯಿಸ್ಥಾನದಲ್ಲಿ ನೋಡುವುದು, ಅಣ್ಣ–ಅತ್ತಿಗೆಯನ್ನು ದೇವರಸ್ಥಾನದಲ್ಲಿ ಪೂಜಿಸುವುದು ಇವೆಲ್ಲವೂ ಒಂದು ಸಮಾಜ ಹೇಗಿರಬೇಕು? ಆ ಸಮಾಜದಲ್ಲಿರುವ ಕುಟುಂಬ ಅದರಲ್ಲಿರುವ ಸದಸ್ಯರ ಪಾತ್ರ ಇವೆಲ್ಲವು ಮನಮುಟ್ಟುವಂತೆ ಕಥೆಯಲ್ಲಿ ನಿರೂಪಿಸಿರುತ್ತಾರೆ. ಇನ್ನೂ ಕಥೆಯಲ್ಲಿ ಬರುವ ನಾಯಕ

ರಾಮ ತಂದೆ ಮಾತಿಗೆ ಕೊಡುವ ಗೌರವ ಅವರ ಮಾತಿಗನುಗುಣವಾಗಿ ಕಾಡಿನ ವಾಸ, ಅವರ ಮಾತಿನ ಪಾಲನೆ, ಪ್ರಜೆಗಳ ಮೇಲಿನ ಭಕ್ತಿ ಇವೆಲ್ಲವೂ ಒಂದು ಸಮಾಜ ಮತ್ತು ಸಮೂಹಗಳ ನಡುವಳಿಕೆಯನ್ನು ಎತ್ತಿಹಿಡಿಯುವಂತಹದು. ಅದಲ್ಲದೆ ಹನುಮಂತ ಮತ್ತು ಭರತನ ಪ್ರೇಮ, ವಾತ್ಸಲ್ಯ, ಗೌರವ ಇವೆಲ್ಲವೂ ಕಥೆಯ ಜೀವಾಳವಾಗಿರುತ್ತವೆ. ಈ ರೀತಿಯ ಕಥೆಗಳು ಸಮಾಜದಲ್ಲಿನ ಕೆಲವೊಂದು ನ್ಯೂನ್ಯತೆಗಳು ಹೋಗಿ ಒಳ್ಳೆಯ, ನೀತಿಯುತವಾದ ಭಾವನೆಗಳು ಜನರಲ್ಲಿ ಮನೆಮಾಡಿ ಅಳಿಸದೆ ಹಾಗೆ ಉಳಿದಿರುತ್ತವೆ. ಇನ್ನೂ ಒಂದು ಹೆಣ್ಣು ಹೇಗಿರಬೇಕು ಅವಳು ಯಾವ ರೀತಿಯಾಗಿ ತನ್ನ ಅತ್ತೆ-ಮಾವನಿಗೆ ಗೌರವಿಸಬೇಕು, ಗಂಡನನ್ನು ಯಾವ ರೀತಿ ಪಾಲಿಸಬೇಕು, ಮೈದುನನ್ನು ಹೇಗೆ ನೋಡಿಕೊಳ್ಳಬೇಕು, ಪಾತಿವ್ರತ್ಯವನ್ನು ಹೇಗೆ ಕಾಪಾಡಿಕೊಳ್ಳಬೇಕು ಎನ್ನುವುದನ್ನು ಸೀತೆಯ ಪಾತ್ರದ ಮುಖಾಂತರ ಒಂದು ಹೆಣ್ಣು ಹೇಗಿರಬೇಕು ಎಂಬುದನ್ನು ತೋರಿಸಿಕೊಡುವಂತಹದ್ದು, ಇನ್ನು ಒಬ್ಬ ವ್ಯಕ್ತಿಯಿಂದ ಸಮಾಜ ಹೇಗೆ ಕೆಟ್ಟು ಹೋಗುತ್ತದೆ ಹಾಗೂ ಕೆಟ್ಟತನದಿಂದ ಆಗುವ ಪರಿಣಾಮಗಳನ್ನು ರಾವಣನ ಮುಖಾಂತರ ತೋರಿಸಿ ಜನರನ್ನು ಸರಿಯಾದ ಮಾರ್ಗಕ್ಕೆ ತರುವಂತಹ ಕೆಲಸ ಶಿಳ್ಳೇಕ್ಯಾತರು ಮಾಡುತ್ತಾರೆ. ಹೀಗೆ ಇರುವುದರಿಂದಲೇ ಜನರಲ್ಲಿ ಒಂದು ಗಾಢವಾದ ನಂಬಿಕೆ ಇದೆ. ಅದೇನೆಂದರೆ "ತೊಗಲುಗೊಂಬೆಯಾಟ ಆಡಿಸಿದರೆ ಖಂಡಿತ ಮಳೆ ಬರುತ್ತದೆ" ಎಂಬುದು ಇದರರ್ಥ. ಜನರಲ್ಲಿ ಅಡಗಿರುವ ರಾಕ್ಷಸತನವನ್ನು ಸ್ವಲ್ಪಮಟ್ಟಿಗಾದರೂ ಹೋಗಲಾಡಿಸಿ ಇದರಿಂದಾಗಿ ವ್ಯಕ್ತಿ ವ್ಯಕ್ತಿ ಮಧ್ಯ ಪ್ರೀತಿ, ಪ್ರೇಮ, ವಾತ್ಸಲ್ಯ, ನಂಬಿಕೆಗಳು ಮನೆ ಮಾಡುತ್ತವೆ. ಇದರಿಂದ ಒಂದು ಉತ್ತಮವಾದ ವಾತಾವರಣ ನಿರ್ಮಾಣವಾಗಿ ಸಂತೋಷದಿಂದಿರಲು ಮಳೆ-ಬೆಳೆ ಚೆನ್ನಾಗಿ ಆಗುತ್ತದೆ ಎಂಬ ಕಲ್ಪನೆ ಇತ್ತು. ಆದರೆ ಇಂದು ಸಿನಿಮಾ ಜಗತ್ತು ಎಲ್ಲ ನಂಬಿಕೆಯನ್ನು ಮಾಯ ಮಾಡಿದೆ.

ಹೀಗೆ ಒಂದು ಉತ್ತಮ ಸಮಾಜದ ನಿರ್ಮಾಣಕ್ಕಾಗಿ ಬೇಕಾಗುವ ಹಾಗೂ ಸದಾ ನ್ಯಾಯ ನೀತಿಯನ್ನು ಕಾಪಾಡಿಕೊಂಡು ಸದೃಡ ಸಮಾಜ ಹೇಗಿರಬೇಕು ಎಂಬುದನ್ನು ಇವರು ತಮ್ಮ ತೊಗಲುಗೊಂಬೆಯಾಟದ ಮುಖಾಂತರ ಪ್ರಸ್ತುತ ಪಡಿಸುತ್ತಿದ್ದರು. ಉದಾಹರಣೆಗೆ 'ವಾಲಿ ಮತ್ತು ಸುಗ್ರೀವರ ಕಾಳಗ', ಅಂಗದ ಸಂದಾನ, ಸೀತಾ ಸ್ವಯಂವರ, ಕುಂಭಕರ್ಣನ ಕಾಳಗ, ಇಂದ್ರಜಿತುಕಾಳಗ, ಶತಕಂಠ ರಾಮಾಯಣ ಅವರು ನಡೆಸಿಕೊಂಡು ಬರುವಂತಹ ಆಟಗಳು. ಈ ಮೇಲೆ ನೋಡಿದ ಎಲ್ಲಾ ರೀತಿಯ ಆಟಗಳು ಸಮಾಜಕ್ಕೆ ಅತ್ಯಂತ ಅವಶ್ಯಕವಾಗಿ ಬೇಕಾಗಿರುವ ಆಟಗಳು,

ಅಣ್ಣತಮ್ಮಂದಿರ ಮಧ್ಯದ ಜಗಳ ಅನ್ಯಾಯದ ವಿರುದ್ಧ ಬಡಿದೇಳುವ ನೀತಿ, ಬೇರೆಯವರಿಗೋಸ್ಕರ ತನ್ನ ಇಡೀ ಜೀವನ ಮುಡುಪಾಗಿಡುವಂತಹ ಗುಣಗಳು ಇವೆಲ್ಲವುಗಳು ಒಂದು ಸಮಾಜ ಹೇಗಿರಬೇಕು ಎಂದು ಪರೋಕ್ಷವಾಗಿ ಜನರಲ್ಲಿ ಅರಿವನ್ನು ಮೂಡಿಸುವಂತಹವು ಹಾಗೂ ತಾವು ತಮ್ಮನ್ನು ತಾವು ಯಾವ ರೀತಿಯಾದ ವ್ಯಕ್ತಿತ್ವವನ್ನು ರೂಢಿಸಿಕೊಂಡರೆ ಒಂದು ಸಮಾಜ ನನ್ನನ್ನು ಸ್ವೀಕರಿಸುತ್ತದೆ ಎನ್ನುವುದನ್ನು ಶಿಳ್ಳೇಕ್ಯಾತರು ಆಡಿ ತೋರಿಸುತ್ತಿದ್ದರು.

**ಲವಕುಶರ ಕಾಳಗ:** ಒಬ್ಬ ರಾಜ ಹೇಗಿರಬೇಕು, ಯಾವ ರೀತಿಯಾದಂತಹ ರಾಜ್ಯ ವ್ಯವಸ್ಥೆಯನ್ನು ಕಾಪಾಡಬೇಕು? ಪ್ರಜೆಗಳ ಯೋಗ ಕ್ಷೇಮ ಯಾವ ರೀತಿ ನೋಡಿಕೊಳ್ಳಬೇಕು? ಜನರಿಗಾಗಿ ತಾನು ಏನುಬೇಕಾದರೂ ತ್ಯಾಗ ಮಾಡಬೇಕು ಎಂಬುದು ಒಂದು ಕಡೆಯಾದರೆ, ಇನ್ನೊಂದೆಡೆ ಗಂಡನ ಮಾತಿಗೆ ಬೆಲೆಕೊಟ್ಟು ವನವಾಸ, ಕಾಡುಮೇಡಿನಲ್ಲಿ ಅಲೆದಾಟ, ಗರ್ಭವತಿಯಾದ ತಾನು ಏನು ಮಾಡಬೇಕು ಎನ್ನುವುದಕ್ಕಿಂತಲೂ ರಾಜನ ಮಾತಿಗೆ ಮನ್ನಣೆ, ಇನ್ನೊಂದೆಡೆ ಸತ್ಸಂಗ, ಮಕ್ಕಳ ಪಾಲನೆ ಪೋಷಣೆಯಲ್ಲಿ ತಾಯಿಯ ಪಾತ್ರ, ಅವರಲ್ಲಿ ಯಾವ ರೀತಿಯಾದ ನೀತಿಗಳನ್ನು ಸರಿ–ತಪ್ಪು ಎಂಬ ಮಾತಿನ ಕಲ್ಪನೆ, ಇದೆಲ್ಲವುದಕ್ಕೂ ಮಿಗಿಲಾಗಿ ಕ್ಷತ್ರಿಯರ ರಾಜಧರ್ಮ, ಅಶ್ವಮೇಧಯಾಗದ ಕುದುರೆ ಕಟ್ಟಿ ಹಾಕುವ ಸಾಹಸ, ತಪ್ಪನು ತಪ್ಪು ಎನ್ನುವ ಧೈರ್ಯ ಹೀಗೆ ಒಬ್ಬ ವ್ಯಕ್ತಿಯಲ್ಲಿರಬೇಕಾದ ಪರಿಪೂರ್ಣ ವ್ಯಕ್ತಿತ್ವವನ್ನು ಹೇಗೆ ನಿರ್ಮಾಣ ಮಾಡಬಹುದು ಎಂಬುದನ್ನು ಅತ್ಯಂತ ಕಡಿಮೆ ಸಮಯದಲ್ಲಿ ಜನರಲ್ಲಿ ತಿಳುವಳಿಕೆ ಮೂಡಿಸುವ ಕಾರ್ಯವನ್ನು ಶಿಳ್ಳೇಕ್ಯಾತರು ತಮ್ಮ ತೊಗಲುಗೊಂಬೆಯಾಟದ ಮುಖಾಂತರ ಜನರಲ್ಲಿ ಅರಿವು ಮೂಡಿಸುವ ಕೆಲಸ ಮಾಡುತ್ತಿದ್ದರು. ಇವೆಲ್ಲವು ಅವರು ಓದಿ ತಿಳಿದುಕೊಂಡಿದ್ದಲ್ಲ, ಅವುಗಳಲು ತಮ್ಮ ತಂದೆ–ತಾಯಿ, ತಾತ–ಮುತ್ತಾತನಿಂದ ಬಳುವಳಿಯಾಗಿ ಹಾಗೂ ಅದರ ಜೊತೆಗೆ ತಮ್ಮ ಅನುಭವವನ್ನು ಸೇರಿಸಿಕೊಂಡು ಜನರನ್ನು ತಿದ್ದುವ ಕೆಲಸ ಮಾಡುತ್ತಿದ್ದರು.

ಒಟ್ಟಾರೆಯಾಗಿ ಹೇಳುವುದಾದರೆ ಇವರು ಸಮಾಜ ಸುಧಾರಕರ ರೀತಿಯಲ್ಲಿ ಕೆಲಸ ಮಾಡುವ ಸಂತರು ಎಂದರೆ ತಪ್ಪಾಗಲಿಕ್ಕಿಲ್ಲ.

**ಮಹಾಭಾರತ ಕಥೆಗಳು:** ಶಿಳ್ಳೇಕ್ಯಾತರು ತಮ್ಮ ತೊಗಲುಗೊಂಬೆಯಾಟದಲ್ಲಿ ಇಡೀ ಮಹಾಭಾರತದ ಹದಿನೆಂಟು ಪರ್ವಗಳನ್ನು ತಮ್ಮದೇ ಆದ ಶೈಲಿಯಲ್ಲಿ ಅದನ್ನು ಬರೆದು ಮಧ್ಯದಲ್ಲಿ ಸಣ್ಣಸಣ್ಣ ಹಾಡುಗಳ ಸಾಲನ್ನು ತುಂಬಿ ಜನರಿಗೆ ತಲುಪಿಸುವ ಕಾರ್ಯ ಮಾಡುವರು. ಇಲ್ಲಿಯೂ ಸಹ ಧರ್ಮರಾಯನ ನ್ಯಾಯನೀತಿ,

ಕೊಟ್ಟಮಾತಿಗೆ ತಪ್ಪದ ವ್ಯಕ್ತಿತ್ವ, ಅಣ್ಣ–ತಮ್ಮರ ಪ್ರೀತಿವಾತ್ಸಲ್ಯ ಕೂಡಿಬಾಳಿದರೆ ಎಂತಹ ಕಷ್ಟಗಳು ಬಂದರೂ ಹೆದರಿಸುವ ಛಲ, ಕೂಡಿ ಬಾಳಿದರೆ ಸ್ವರ್ಗ, ಭೀಷ್ಮರ ಅನ್ನದ ಋಣ, ದ್ರೋಣನ ಗುರುಧರ್ಮ, ಏಕಲವ್ಯನ ಗುರುಭಕ್ತಿ ಇವುಗಳೆಲ್ಲವು ತಮ್ಮ ತೊಗಲುಗೊಂಬೆಗಳ ಮುಖಾಂತರ ಆ ಕಥೆಗೆ ಜೀವ ತುಂಬಿ ಅತ್ಯಂತ ಸೊಗಸಾಗಿ ಜನರ ಕಣ್ಣಿಗೆ ಕಟ್ಟುವಂತೆ ಮನದಟ್ಟು ಮಾಡಿಸುತ್ತಿದ್ದರು.

**ಪದ್ಯಸಾಹಿತ್ಯ:** ಶಿಳ್ಳೇಕ್ಯಾತರ ಮುಖ್ಯ ಅಭಿವ್ಯಕ್ತಿ ಪ್ರಕಾರ ಅವರಲ್ಲಿರುವ ಸಾಹಿತ್ಯ, ಪದ್ಯಸಾಹಿತ್ಯ. ತೊಗಲುಗೊಂಬೆಯಾಟವಾಗಿರಬಹುದು. ಬಯಲಾಟಗಳಾದ ಸಣ್ಣಾಟ, ದೊಡ್ಡಾಟ ಇವೆಲ್ಲವುಗಳಲ್ಲಿ ಜೀವ ತುಂಬುವುವು ಹಾಡುಗಳು, ಅವುಗಳನ್ನು ರಾಗಬದ್ಧವಾಗಿ ಹಾಗೂ ತಾಳಬದ್ಧವಾಗಿ ತುಂಬಾ ಸೊಗಸಾದಂತಹ ರೀತಿಯಲ್ಲಿ ಹಾಡುಗಳನ್ನು ಅವರು ಹೇಳುತ್ತಾರೆ. ರಾಜಮಹಾರಾಜರ ಗುಣಗಾನ ಹಿಡಿದು ಒಬ್ಬ ರೈತನ ವರ್ಣನೆಯವರಿಗೆ ವಸ್ತು ಅವರ ಹಾಡಿನಲ್ಲಿ ಅಡಗಿರುತ್ತದೆ. ಹಂತಿಪದ, ಲಾವಣಿಪದ, ಕೀರ್ತನೆಗಳು, ಪುರಾಣಗಳ ಸಾಲುಗಳು, ಮೋಹರಂ ಪದಗಳು ಹೀಗೆ ಒಬ್ಬ ರೈತನಿಂದ ರಾಜನವರೆಗೂ ಜನರ ಮನೋರಂಜನೆ, ನೀತಿ, ನ್ಯಾಯಕ್ಕೆ ಸಂಬಂಧಪಟ್ಟಂತಹ ಹಾಡುಗಳನ್ನು ಇವರು ಹೇಳುತ್ತಾರೆ. ತಂಬೂರಿ, ಮೃದಂಗ, ಹಾರ್ಮೋನೀಯಂ ಇವರ ಕೈಯಲ್ಲಿದ್ದರೆ ಸಾಕು ಅಂದು ಇಡೀ ಊರಿನ ಜನರನ್ನು ಒಂದು ಕಡೆ ಕೂಡಿಸುವ ಶಕ್ತಿ ಇವರಿಗೆ ಬರುತ್ತದೆ. ಇವರ ಧ್ವನಿ, ರಾಗಕ್ಕೆ ತಲೆತೂಗದವರೆ ಇಲ್ಲ. ಆದರೆ ದುರ್ದೈವವಶಾತ್ ಇಂದು ಆ ಹಾಡುಗಳನ್ನು ಹಾಡಿ ಭಿಕ್ಷೆ ಬೇಡುವ ಸಂದರ್ಭ ಇಂದು ಅವರಿಗೆ ಬಂದೊದಗಿದೆ. ಹಿಂದೆ ಒಂದು ಕಾಲದಲ್ಲಿ ಅವರನ್ನು ಎಲೆ–ಅಡಿಕೆ, ತೆಂಗುಕೊಟ್ಟು ಜನರು ತಮ್ಮ ಊರಿಗೆ ಬರಮಾಡಿಕೊಳ್ಳುತ್ತಿದ್ದರು. ಊರಿನಗೌಡ ಅವರಿಗೆ ಬೇಕಾಗುವಷ್ಟು ಅಕ್ಕಿ, ಜೋಳ, ಗೋಧಿ ಮತ್ತು ಬೇಳೆಯನ್ನು ಕೊಡುತ್ತಿದ್ದರು. ಆದರೆ ಇಂದು ಅವರಿಗೆ ಕವಡೆ ಕಾಸಿನ ಕಿಮ್ಮತ್ತಿಲ್ಲದಂತಾಗಿದೆ. ಈ ಕೆಳಗೆ ಅವರು ಸಂದರ್ಭಕ್ಕನುಸಾರವಾಗಿ ದಿನನಿತ್ಯದ ಹಬ್ಬ ಹರಿದಿನಗಳಲ್ಲಿ ಬಳಸುವ ಕೆಲವೊಂದು ಮೌಖಿಕ ಸಾಹಿತ್ಯದ ತುಣುಕುಗಳನ್ನು ಕೊಡಲಾಗಿದೆ. ಈ ಹಾಡುಗಳನ್ನು ದೊಡ್ಡಮನಿ ಮತ್ತು ಸಾಸನೀಕ್‌ರವರ ಶಿಳ್ಳೇಕ್ಯಾತ ಎಂಬ ಪುಸ್ತಕದಿಂದ ಆಯ್ದುಕೊಳ್ಳಲಾಗಿದೆ. ಈ ಶಿಳ್ಳೇಕ್ಯಾತರಲ್ಲಿ ಅವರು ತಮ್ಮ ದಿನನಿತ್ಯದ ಬದುಕಿಗಾಗಿ ಗಂಡು ಮತ್ತು ಹೆಣ್ಣು ಇಬ್ಬರೂ ಹಾಡುಗಳನ್ನು ಹಾಡುವುದನ್ನು ಕರಗತ ಮಾಡಿಕೊಂಡಿರುವುದರಿಂದ ಇಬ್ಬರೂ ಇವುಗಳನ್ನು ಹಾಡುವುದು ಒಂದು ಪದ್ಧತಿ, ರೂಢಿಯಾಗಿದೆ. ಶಿಳ್ಳೇಕ್ಯಾತರು ತಮ್ಮ ತೊಗಲುಗೊಂಬೆಯಾಟವನ್ನು ಪ್ರಾರಂಭಿಸ–

ಬೇಕಾದರೆ ಗಣೇಶನ ಸ್ತುತಿಯಿಂದಾರಂಭಿಸಿ ಎಲ್ಲಾ ದೇವರುಗಳನ್ನು ನೆನೆಸಿ ತಮ್ಮ ತೊಗಲುಗೊಂಬೆ ಅಥವಾ ಬಯಲಾಟಗಳಲ್ಲಿ ಯಾವುದೇ ವಿಘ್ನ ಬರದಂತೆ ನೋಡಿಕೊಳ್ಳಲು ಸ್ತುತಿ ಮಾಡುತ್ತಾರೆ. ಉದಾಹರಣೆಗೆ

ಗೌರಿವರ ಪುತ್ರ ಶತ ತಾಮಾಚರಿತಾ,
ಯೋಗಿ ಸಜ್ಜನ ಸ್ತೋತ್ರ ಜನನಿ ಬಾನಾತ್ರ
ನಿಟಿಲನೇತ್ರ ನೆ ಸುತನೆ ನಿಗಮಾಗಮಾ ವಂದಿತ

ಸ್ಪಟಿಕ ನೀ ಸನ್ನಿಭ ಕರ್ಣಕುಂಡಲಾಧರನೆ
ಪೊಡವಿಯೊಳ್ಕುಡತಿನೆಯಾವಡಿಯಾ
ಭೀಮಸೇನ ಬಿಡದೇ ಭಜಿಸುವೆ ನಾನು
ಕೊಡು ಯನಿಗೆ ಮತಿಯಾ

ಹೀಗೆ ಒಬ್ಬ ಶಿಳ್ಳೇಕ್ಯಾತ ತನ್ನ ಆಟದ ಪ್ರಾರಂಭದಲ್ಲಿ ಗೌರಿಗಣೇಶನನ್ನು ಪ್ರಾರ್ಥಿಸಿ ಯಾವುದೇ ವಿಘ್ನ ಬರದಂತೆ ಬೇಡಿಕೊಳ್ಳುತ್ತಾನೆ. ಈ ಸ್ತುತಿಯೊಂದಿಗೆ ಪ್ರಾರಂಭವಾದ ತೊಗಲುಗೊಂಬೆಯಾಟದಲ್ಲಿ ಮಧ್ಯ ಮಧ್ಯ ಸನ್ನಿವೇಶಕ್ಕನುಗುಣವಾಗಿ ಹಾಡುಗಳನ್ನು ಹಾಡುತ್ತಿರುತ್ತಾರೆ. ಕೊನೆಯದಾಗಿ ಅವರು ತಮ್ಮ ಆಟವನ್ನು ಮುಗಿಸಬೇಕಾದರೆ ಅನ್ನದಾತನಾದ ಭಗವಂತನನ್ನು ನೆನೆಸಿ, ಕಥೆಯ ಸಾರವಾದ ಶ್ರೀರಾಮ, ತಾಯಿ ಸೀತೆಗೆ ಮತ್ತು ಹನುಮಂತನನ್ನು ಮಂಗಳಾರತಿ ಮಾಡುವ ಸಂಪ್ರದಾಯವಿದೆ ಉದಾಹರಣೆಗಾಗಿ

ಮಂಗಲ ಜಯಮಂಗಲ ಜಯ ತುಂಗ ವಿಕ್ರಮ ಬಾಲದಂಡಾಗಿ ಬೆಳಗಿದನೆ
ವಾಯು ಕುಮಾರಗೆ, ಮಾಯಾನಗೆಲಿದಾಗೆ, ಧೀರ ರಾಮರ ಧೂತಗೆ ಈತಗೆ

ವಡಿಯಾರಾಜ್ಞೆ ಇಂದ, ಕಡಲ ದಾಟಿ ಬಂದು ದೃಢವುಳ್ಳ ಮಾರುತಿಗೆ
ತಾಯಿ ಸೀತಾಮಗೆ ಮುದ್ದಿ ನುಂಗುರವಿತ್ತು, ಮಾಡುವಿ ದೈತ್ಯರ
ಕೊಂದನು ಈತನು.
ಶ್ರೀಂಗಾರವನವನ್ನು ಕಿತ್ತು ಚೆಲ್ಲಿದಾತನು, ಸತ್ಯ ಮಾರುತಿಯೀ
ತಾನು
ರಕ್ಕಸರೆರಿಯ ಸೊಕಾನು ಮುರಿ ಊರ ಮತ್ತೆ ಲಂಕೆಯ ಸುಟ್ಟಾ
ಸುದಿಟ್ಟಾನೂ
ಲೋಕಕ್ಕೆಲ್ಲ ಕಾಣುತಾವಿ, ಕಣ್ಣುಕಂಡ ಕಂಡ ಕಾಲ ಓಡಿ

ಹೋತಣ್ಣಾ
ಕೈಹರಿದು ಬಾಯಿ ತಿಂತಣ್ಣಾ

ಹೀಗೆ ತಮ್ಮ ಕುಲದೇವತೆಯ ಬಗ್ಗೆ ವರ್ಣನಾತ್ಮಕವಾದ ಹಾಡುಗಳ ಮುಖಾಂತರ ಅವರಿಗೆ ಮಂಗಳವನ್ನು ಹೇಳಿ ಅಂದಿನ ಕಾರ್ಯಕ್ರಮವನ್ನು ಮುಗಿಸುವರು. ಇನ್ನು ಊರ ಪ್ರಮುಖರಾದ ಗೌಡ, ಪಟೇಲರಿಗೆ ಸಂಬಂಧಿಸಿದಂತೆ ಹಲವು ರೀತಿಯ ವರ್ಣನಾತ್ಮಕ ಪದಗಳನ್ನು ಬಳಸಿ, ಅವರ ಗುಣಗಾನವನ್ನು ಮಾಡಿ ಅವರಿಂದ ಭಕ್ಷಿಸು ಪಡೆದು ಸಂತೋಷವಾಗಿ ತಮ್ಮ ಗುಡಿಸಿಲಿಗೆ ತೆರಳುವರು. ಉದಾಹರಣೆಗಾಗಿ;

ನಮ್ಮ ಮಾದೇಗೌಡರ ಹೆಸರೇಳಿ _ ತಾನಂದೆ ನಾನ
ಅವರ ತಂದೆ–ತಾಯಿ ಹೆಸರೇಳಿ
ಅವರ ಬಂಧು – ಬಳಗದ ಹೆಸರೇಳಿ
ಅವರು ಕೊಟ್ಟರೆ ಹೋಗಲರಿಯದು
ತ್ಯಾಗದಲ್ಲಿ ಕರ್ಣನು
ಆಯುರ್ಬೋಗದಲ್ಲಿ ದೇವೇಂದ್ರನು
ಸತ್ಯದಲ್ಲಿ ಹರಿಶ್ಚಂದ್ರನು
ಅಪ್ಪಕೊಟ್ಟರೆ ಹೋಗಲರಿಯದು
ಅವರ ಸಂತಾನ ಸಾವಿರಾಗಲಯ್ಯಾ
ಅವರ ಮನೆತನ ಬೆಳೆಯಲಪ್ಪ
ಕರಿಕಿಯ ಬೇರಿನಂಗ
ಅವರ ಮನ ನೆಮ್ಮದಿಯಿರಲೆಪ್ಪ

ಇನ್ನೂ ಸ್ವಲ್ಪ ಮುಂದುವರಿದು ಶಿಳ್ಳೇಕ್ಯಾತರಿಗೆ ಸಂತೋಷವಾದರೆ ಅವರು ಈ ಕೆಳಗಿನಂತೆ ಹರಿಸುತ್ತಾರೆ.

ಆಗಲ್ಯಾಗಲಿ ಈ ಮನಿ
ಹಾಗಲ ಬಳ್ಯಾಗಿ ಹಬ್ಬಲೀ ಮನಿ ಚಪ್ಪರುತ ಚಲ್ಲೋರೆಯಲಿ ನೊರೆಹಾಲು
ಚಪ್ಪರುಕಚ್ಚಲ್ಲೋರೆಯಲಿ ಈ ಮನಿ ಚಪ್ಪರುಕಚೆಲ್ಲೋರೆಯಲಿ
ಚಪ್ಪರುಕಚ್ಚಲ್ಲೋರೆಯಲಿ ಈ ಮನಿ ಹಾಗಲು ಬಳ್ಯಾಗಿ ಹಬ್ಬಲಿ
ಹಾಗಲು ಬಳ್ಯಾಗ ಹಬ್ಬಲಿ ಈ ಮನಿ ಚಪ್ಪುರಕ ಕೆಚ್ಚೊಲ್ಲೋರೆಯಲಿ
ಚಪ್ಪರುಚಕಲ್ಲೋರಿಯಲಿ ಈ ಮನಿ ತುಪ್ಪರಿ ಬಳ್ಯಾಗಿ ತುಗಾಲಿ
ತುಪ್ಪರಿ ಬಳ್ಯಾಗಿ ತುಗಾಲಿ ಈ ಮನಿ ಚಪ್ಪರುಕಚೆಲ್ಲೋರಿಯಲೋ

ಹಾಡಿ ಹಾಡಿ ಕೊಂಡ್ಹೋದರೆ ಗುರುವೇ ಬೇಗೊಂದು ಬೆಳಗೊಂದು ಆಗ್ಯಾವೋ
ಇಲ್ಲಿಗೆ ಸಂದ ಇಳ್ಯಾವ ಮುಂದ ನನ್ನಗಲ್ಲಾ ನನ್ನ ಗುರುವಿಗೆ.

ಈ ರೀತಿಯಾಗಿ ಗಂಡು ಮಕ್ಕಳ ಊರಿನ ಗೌಡ ಕುಲಕರ್ಣಿಯನ್ನು ವರ್ಣನೆ ಮಾಡಿದರೆ, ಹೆಣ್ಣು ಮಕ್ಕಳು ಸಹ ಗಂಡಸರಿಗಿಂತ ಕಡಿಮೆಯೇನಿಲ್ಲ. ಅವರು ಸಹ ಸೋಬಾನ ಪದ, ತೊಟ್ಟಿಲು ಪದ ಹಾಗೂ ಹಚ್ಚೆಯ ಪದಗಳನ್ನು ಹಾಡುತ್ತಾರೆ. ಆದರೆ ಇನ್ನೊಂದು ವಿಶೇಷವೇನೆಂದರೆ ಹೆಣ್ಣುಮಕ್ಕಳು ತೊಗಲುಗೊಂಬೆಯಾಟವಾಗಿರಬಹುದು ಅಥವಾ ಬಯಲಾಟಗಳಾಗಿರಬಹುದು. ಅವರು ಗಂಡಸರ ಜೊತೆಗೂಡಿ ಹಾಡಿ ಆ ಆಟಕ್ಕೆ ಒಂದು ಕಳೆಯನ್ನು ತಂದುಕೊಡುತ್ತಾರೆ. ಇನ್ನೂ ಅವರಲ್ಲಿಯೂ ದೇವರ ಹೆಸರಿನಲ್ಲಿ ಮನೆ-ಮನೆ ಕೀರ್ತನೆಗಳನ್ನು ಹಾಗೂ ಗರತಿಯ ಹಾಡುಗಳನ್ನು ಹೇಳುತ್ತಾ ಹೋಗಿ ದವಸ-ಧಾನ್ಯ ಅಥವಾ ಹಣವನ್ನು ತರುವಂತಹದ್ದು ಒಂದು ರೂಢಿ. ಅವರ ಉದ್ಯೋಗ ಹಚ್ಚೆ ಹಾಕುವುದು. ಆದರೆ ಅಂದಿನ ಕಾಲದಲ್ಲಿ .ಹೆಣ್ಣುಮಕ್ಕಳು ತಮ್ಮ ಹಣೆಯಲ್ಲಿ ಹಚ್ಚೆ ಹಾಕಿಸಿಕೊಳ್ಳುವುದು ಮುತ್ತೈದೆ ಚಿಹ್ನೆ ಆಗಿತ್ತು. ಆದರೆ ಇಂದು ಒಂದು ಫ್ಯಾಷನ್ ಆಗಿ ಪರಿಣಮಿಸಿ ಅತ್ಯಂತ ದೊಡ್ಡ ಮೊತ್ತದ ಹಣ ಗಳಿಸುವ ಉದ್ಯೋಗವಾಗಿ ಪರಿಣಮಿಸಿದೆ.

ಹಿಂದೆ ಹೆಣ್ಣುಮಕ್ಕಳಿಗೆ ಹಣೆಯಲ್ಲಿ ಹಚ್ಚೆ ಹಾಕುವಾಗ ಅವಳ ನೋವನ್ನು ಮರೆಸಲು ಹಾಡುಗಳನ್ನು ಹೇಳುತ್ತಿದ್ದರು. ಅದು ಈ ಕೆಳಗಿನಂತಿದೆ.

ಅಕ್ಕ ಹೋಗೋನ ಬಾರೆ ಕಿಕ್ಕೇರಿಗೆ
ಹಚ್ಚೆ ಹೊಯ್ಯುದೇ ನಿನ್ನ ಬಲನಾರಿ
ಹಚ್ಚೆಗೇ ಹೊಯ್ಯುದು ನಿನ್ನ ಬಲ ಇರಲೆಮ್ಮ
ಕುಕ್ಕಿಸಿಕೊಳ್ಳುದೇ ನಿನ್ನ ಬಲನಾರಿ
ಕುಕ್ಕಿಸಿಕೊಳ್ಳುದೇ ನಿನ್ನ ಬಲ ನಾರಿ ಇರಲಮ್ಮ
ಕೂಲಿ ಕೊಡುವಾಗ ನಿಮ್ಮ ದುಃಖದ್ಹಾಡಿ

ಅಡವೂರ ದಾರಿಯಲ್ಲಿ ಗಿಡವೆಲ್ಲ ಮಲ್ಲೀಗೆ
ಕಿಡಿ ಕಿಡಿ ನೆಂಬೊ ಕಿರಿಯಣ್ಣ ನಾರಿ
ಕಿಡಿ ಕಿಡಿ ನೀ ನೆಂಬೋ ಕಿರಿಯಣ್ಣನ ಕಂಡರೆ
ಕಿಡಿ ಕಿಡಿ ಎಂದೂ ಹೆದರುವ ನಾರಿ
ಕಡೂರು ದಾರಿಯಲ್ಲಿ ಗಿಡವೆಲ್ಲ ಮಲ್ಲೀಗೆ
ಕಿಡಿ ಕಡಿ ನೆಂಬೊ ಕಿರಿಯಣ್ಣ ನಾರಿ

ಹಚ್ಚೆ ಹೊಯೋಣ ಬಾರೆ ನಿನ್ನ
ಬಲಗೈಯ ತೋಳಿನ ಮೇಲೆ
ಹಚ್ಚೆ ಮೇಲಿರುವ ಬಸವನ ನಾರಿ
ಹಚ್ಚೆ ಮೇಲಿರುವ ಬಸವನ ನಾರಿ
ಹಚ್ಚೇನು ಕುಕ್ಕಿಸಿಕೊಳ್ಳುವುದೇ ನಿನ್ನ ಬಲನಾರಿ
ಬಂಡಿ ಹೊಡೇನು ಬಾರೆ ನಿನ್ನ ಬಲಗೈ ತೋಳಿನ ಮೇಲೆ

ಬಂಡಿಯ ಮೇಲಿರುವ ಬಸವನ ನಾರಿ
ಬಂಡಿ ಮೇಲಿರುವ ಬಸವನ ನಾರಿ
ಕುಕ್ಕಿಸಿಕೊಳ್ಳುವುದೇ ನಿನ್ನ ಬಲನಾರಿ
ಬಂಡಿ ಮೇಲಿರುವ ಬಸವನ ಹೂಡೇನು
ಕುಕ್ಕಿಸಿಕೊಳ್ಳುವುದೇ ನಿನ್ನ ಬಲನಾರಿ

ಸಣ್ಣ ಸೀರೆ ಉಟ್ಟು ಹೊನ್ನಮಡಲೀಗಿಟ್ಟು
ನಮ್ಮಮ್ಮ ನನ್ನ ಕಳವ್ಯಾಳ ನಾರಿ
ನಮ್ಮಮ್ಮನೇ ನನ್ನ ಕಳವಿಸಿ ತಕೊಂಡು
ಸಾಲಾ ಸಂಪಿಗೆ ನೆರಳಲ್ಲಿ
ಸಾಲಾ ಸಂಪಿಗೆ ನೆರಳಲ್ಲಿ ನಿತಕೊಂಡು
ದುಃಖ ಮಾಡೇಳೆ ಶಿವನಿಗೆ ನಾರಿ
ದುಃಖವ ಮಾಡಲಿಕೆ ದುಡಿದು ಕೊಂಬುವ ಮಗನಿಗೆ

ಹೆತ್ತಲ್ಲಿ ತಾಯಿ ಹೆರವೀಗೆ ನಾರಿ
ಹೆತ್ತಲ್ಲಿ ತಾಯಿ ಹೆರವೀಗ ಹೆಣ್ಣು
ಮಗಳ ದುಃಖ ಮಾಡತೀರ ಹಡದವ್ವ ನಾರಿ
ಅತ್ತೆ ಮಾವಂದಿರಿಗೆ ಮತ ಬಾಂಧವರಿಗೆ
ಕಣ್ಣಿಟ್ಟು ನೀನು ಸಲಹಮ್ಮ ನಾರಿ
ಕಣ್ಣಿಟ್ಟು ಸಲುಹಿ ಹೆತ್ತೂರ ಹೆಸರ ತರಬೇಕು ನಾರಿ
ಹೆತ್ತೂರನೇ ಹೆಸರ ತರಬೇಕು ತಾಯೆಣ್ಣೆ
ಹಚ್ಚೆ ಹೊಯೋದೆ ಹರಿಯಣ್ಣ ನಾರಿ

**ಒಗಟುಗಳು:** ಶಿಳ್ಳೇಕ್ಯಾತರು ತಮ್ಮ ದಿನನಿತ್ಯದ ಜೀವನದಲ್ಲಿ ಸಮಯವನ್ನು ಕಳೆಯುವುದಕ್ಕಾಗಲಿ ಅಥವಾ ತೊಗಲುಗೊಂಬೆಯಾಟವನ್ನು ಆಡಿಸುವ ಸಂದರ್ಭದಲ್ಲಿ

ಅವರು ಕೆಲವೊಂದು ಒಗಟುಗಳನ್ನು ಹೇಳುತ್ತಾರೆ. ತಾವು ತೊಗಲುಗೊಂಬೆಗಳ ಆಟವನ್ನು ಆಡಿಸುವಾಗ ಜನರಿಗೆ ಮಧ್ಯದಲ್ಲಿ ಎಲ್ಲಿಯೂ ಬೇಸರ ಆಗದ ಹಾಗೆ ಕೆಲವೊಂದು ಒಗಟುಗಳನ್ನು ಬಿಡಿಸಲು ಹೇಳುತ್ತಾರೆ. ಜನರು ಅದರ ಉತ್ತರಕ್ಕಾಗಿ ತಲೆಕೆಡಿಸಿಕೊಳ್ಳಬೇಕಾದರೆ ಶಿಳ್ಳೇಕ್ಯಾತ ಅದನ್ನು ಬಿಡಿಸಿ ತಮ್ಮ ಮುಂದಿನ ಆಟ ಮುಂದುವರಿಸುತ್ತಾರೆ. ಇನ್ನೂ ಕೆಲವೊಮ್ಮೆ ತಾವು ಹೋದ ಊರಲ್ಲಿ ಬಿಡಾರ ಹಾಕಿದಾಗ ಮಳೆಬರುವಾಗ ಅಥವಾ ಹಬ್ಬ ಹರಿದಿನಗಳಲ್ಲಿ ನೆರೆದವರ ಮಧ್ಯ ಹೋಗಿ ಅವರಿಗೆ ತಮ್ಮ ಚಾಣಾಕ್ಷತನದ ಪ್ರಶ್ನೆಗಳನ್ನು ಹಾಕಿ ಎಲ್ಲರಲ್ಲಿಯೂ ಉತ್ಸಾಹ ಮೂಡಿಸುವ ಕಾರ್ಯಮಾಡುತ್ತಾರೆ. ಅವರ ಕೆಲವೊಂದು ಒಗಟುಗಳನ್ನು ಇಲ್ಲಿ ಕೊಡಲಾಗಿದೆ.

"ಧರಣಿಗೊಡೆಯನ ಸುತನ ಸತಿಯೊಳ ಕದ್ದೊಯ್ದವನ
ಪುರವಸುಟ್ಟವನ, ಅನುಜನ,
ಅನುಜನುಮಗನ, ಮೊಮ್ಮಗನ ಹೆಸರೇನು?

"ಉತ್ತರ"

ಧರಣಿಗೊಡೆಯ – ದಶರಥ

ಅವನ ಸುತ – ರಾಮ

ಅವನ ಸತಿ – ಸೀತೆ

ಅವಳನ್ನು ಕದ್ದೊಯ್ದವನು – ರಾವಣ

ಅವನ ಪುರವ ಸುಟ್ಟವನು – ಆಂಜನೇಯ

ಅವನ ಅನುಜನು – ಭೀಮ

ಅವನ ಅನುಜನು – ಅರ್ಜುನ

ಅವನ ಮಗನಾದ ಅಭಿಮನ್ಯು

ಅವನ ಮೊಮ್ಮಗ – ಜನಮೇಜರಾಯ

ಇವನೇ ಅಭಿಮನ್ಯುವಿನ ಮೊಮ್ಮಗ ಪರೀಕ್ಷಿತ ರಾಜನ ಮಗ

"ಕತ್ತಲೆ ಮನೆಯೊಳ ತುತ್ತುಗೆಯನು ಮುರಿದ ಆತನ ಅಣ್ಣನ, ತಂದೆಯ ಹೊತ್ತಿರುವ ವಾಹನ ಯಾವುದು?

"ಉತ್ತರ"

ಕತ್ತಲೆಯ ಮನೆಯೊಳಗೆ ಕುತ್ತುಗೆಯನ್ನು ಮುರಿದವನು ಭೀಮ,

ಇವನು ಕೀಚಕನನ್ನು ಕೊಲೆ ಮಾಡಿರುವನು

ಆತನ ಅಣ್ಣ ಎಂದರೆ – ಧರ್ಮರಾಯ

ಅವನ ತಂದೆ – ಯಮಧರ್ಮ

ಈತನ ವಾಹನ – ಕೋಣ

ಈ ರೀತಿಯಾಗಿ ಶಿಳ್ಳೇಕ್ಯಾತರು ತಮ್ಮದೆ ಆದ ಜನಪದ ಶೈಲಿಯಲ್ಲಿ ದಿನನಿತ್ಯದ ಜೀವನದಲ್ಲಿ ನಡೆಯುವ ಘಟನೆಗಳನ್ನಾಧರಿಸಿ ತಮ್ಮದೇ ಆದ ಗದ್ಯ ಮತ್ತು ಪದ್ಯ ರೀತಿಯ ಸಾಹಿತ್ಯವನ್ನು ರಚಿಸಿ ಅವರ ಜೀವನಕ್ರಮಕ್ಕೆ ತೊಂದರೆಯಾಗದಂತೆ ತಮ್ಮ ಸಂಸಾರ ನಡೆಸಿಕೊಂಡು ಬರುತ್ತಾರೆ. ಆದರೆ ಇಂದು ಈ ಸಂಸ್ಕೃತಿ ಕೈಬಿಟ್ಟು ಪಟ್ಟಣದ ಸಂಸ್ಕೃತಿಗೆ ಸ್ಥಾನಪಲ್ಲಟಗೊಂಡು ಅವರು ನಗರ ಜೀವನಶೈಲಿಯ್ನು ಅಳವಡಿಸಿಕೊಂಡು ಹೋಗುತ್ತಿದ್ದಾರೆ.

# ಅಧ್ಯಾಯ ಆರು

# ಜನಪದ ಕಲೆಗಳು

ಕಲೆ ಮನುಷ್ಯನ ಮನಸ್ಸನ್ನು ಮುದಗೊಳಿಸಿ ಅವನಲ್ಲಿ ವಿಶಿಷ್ಟವಾದ ಸಂಸ್ಕಾರವನ್ನು ಮೂಡಿಸುತ್ತದೆ. ಮನಸ್ಸನ್ನು ಎತ್ತರ ಎತ್ತರಕ್ಕೊಯ್ದು ಸಂಸ್ಕಾರಗೊಂಡ ಹದವಾದ ವ್ಯಕ್ತಿತ್ವವನ್ನು ರೂಪಿಸಲು ನೆರವಾಗುತ್ತದೆ. ಭೌತಿಕ ಜೀವನದ ಹೋರಾಟದಲ್ಲಿ ಸದಾ ತೊಳಲುವ ಮಾನವನ ಕಲೆಯನ್ನು ಆರಾಧಿಸದಿದ್ದರೆ ಅವನ ಪಾಲಿಗೆ ಮಾನಸಿಕ ಸೌಖ್ಯ ದೂರವಾಗುತ್ತದೆ. ಜೀವನದಲ್ಲಿ ನೆಮ್ಮದಿ ಸಂತೃಪ್ತಿಗಳು ದೊರೆಯದಾಗುತ್ತವೆ. ಅವನಲ್ಲಿ ಮಾನವೀಯ ಗುಣಗಳನ್ನು ಜಾಗೃತಗೊಳಿಸಲು, ಸೌಂದರ್ಯ ಪ್ರಜ್ಞೆಯನ್ನು ಎಚ್ಚರಿಸಲು, ಒಳ್ಳೆಯದರ ಕಡೆ ಅವನು ಸದಾ ಆಲೋಚಿಸುವಂತೆ ಮಾಡಲು ಕಲೆ ಒಂದು ಚಿರಂಜೀವಿಯಂತೆ ಅವನ ಪಾಲಿಗೆ ಲಭ್ಯವಾಗುತ್ತದೆ. ಶರೀರದ ಬೆಳವಣಿಗೆಗೆ ಆಹಾರ ಎಷ್ಟು ಅಗತ್ಯವೋ ಮನಸ್ಸಿನ ಬೆಳವಣಿಗೆಗೆ, ಸಂಸ್ಕಾರಕ್ಕೆ ಕಲೆ ಅಷ್ಟೇ ಅವಶ್ಯಕ.

ಮಾನವ ಸಂಸ್ಕೃತಿಯಲ್ಲಿ ಕಲೆಗೆ ಅಗ್ರಸ್ಥಾನವಿದೆ. ಆದಿಕಾಲದಿಂದಲೂ ಕಲೆ ಮನುಷ್ಯನ ಕೈಹಿಡಿದುಕೊಂಡೇ ಬಂದಿದೆ. ಪ್ರತಿಭೆಯ ಮೂಸೆಯಲ್ಲಿ ಅರಳಿ ನಿಲ್ಲುವ ಇದು ಅವನ ದಿನನಿತ್ಯದ ವ್ಯವಹಾರದಲ್ಲಿ ತೋರಿಬರುತ್ತದೆ. ತನ್ನನ್ನು ಅಲಂಕರಿಸಿಕೊಳ್ಳುವುದರಲ್ಲಿ, ತನ್ನ ಕೆಲಸಕಾರ್ಯಗಳನ್ನು ಹಗುರ ಮಾಡಿಕೊಳ್ಳುವಲ್ಲಿ, ಶ್ರಮವನ್ನು ಮರೆತು ಕೆಲಕಾಲ ಆನಂದದಲ್ಲಿ ಮೈಮರೆಯುವಲ್ಲಿ ಕಲೆ ಅವನಿಗೆ ಸಹಾಯಕ. ಅದು ಹಾಡಿನ ರೂಪದಲ್ಲಿರಬಹುದು. ಕುಣಿತದ ರೂಪದಲ್ಲಿರಬಹುದು. ಬೆಳವಣಿಗೆಯನ್ನು ಪಡೆದುಕೊಂಡಂತೆ ರೂಪುಗೊಂಡು ಬಯಲಾಟ, ನೃತ್ಯ, ಸಂಗೀತ ಮೊದಲಾದ ಕಲೆಗಳು ಪ್ರೌಢಕಲೆಯಾಗಿ ಮಾರ್ಪಾಡಬಹುದು. ಆರಂಭದಲ್ಲಿ ಮನುಷ್ಯ, ಬದುಕಿನ ಎಲ್ಲ ಸ್ತರಗಳಲ್ಲಿಯೂ ಸರಳ ರೂಪದಲ್ಲಿ ಕಲೆಯನ್ನು ತನಗೆ ಅರಿವಿಲ್ಲ-ದಂತೆಯೇ ಸಮಾವೇಶಗೊಳಿಸಿಕೊಂಡೇ ಬಂದ. ಬೇಟೆಯಲ್ಲಿ, ವ್ಯವಸಾಯದಲ್ಲಿ, ಮೀನುಗಾರಿಕೆಯಲ್ಲಿ ವಿವಿಧ ವೃತ್ತಿವಿಶೇಷಗಳಲ್ಲಿ, ಮನೆಗೆಲಸಗಳಲ್ಲಿ ಅವನ ಸಾಧನೆಯ ಎಲ್ಲ ಮಗ್ಗುಲುಗಳಿಗೂ ಕಲೆಯ ಮೆರಗು ಬೇಕಾಯಿತು. ಅವನ ಜೀವನದ ನೋವು, ನಲಿವುಗಳನೊಡಗೂಡಿದ, ಹೀಗೆ ಅವನಿಂದ ಬಂದಂತಹ ಮಾತು ಹಾಡುಗಳಾಗಿ, ಕಲೆಗಾದೆಗಳಾಗಿ ಒಗಟಾಗಿ ಎಲ್ಲವು ಕಲೆಯಾದವು. ಅವನೂ ನಲಿದ ಇತರರನ್ನು ನಲಿಸಿದ. ಮೊದಲು ಸರಳವಾದ ಕಲೆಗಳು ಕಾಲ ಕಳೆದಂತೆ ಮನುಷ್ಯನ ಬುದ್ಧಿ

ವಿಕಾಸವಾದಂತೆ ಸಂಕೀರ್ಣ ಕಲೆಗಳಾದವು. ಹೀಗೆ ಜನಪದರ ಕಲೆಗಳು ಹೆಮ್ಮರವಾಗಿ ಬೆಳೆದುಬಿಟ್ಟವು. ಮುಂದೆ ಶಾಸ್ತ್ರೀಯ ಚೌಕಟ್ಟು ಬಂದು ಉನ್ನತ ಕಲೆಗಳಾದವು.

ಹೀಗೆ ಜನಪದ ಸಂಸ್ಕೃತಿ ಹತ್ತು ಹಲವು ಮಾಧ್ಯಮಗಳಲ್ಲಿ ತನ್ನ ಅಸ್ತಿತ್ವವನ್ನು ಗುರುತಿಸಿಕೊಳ್ಳುತ್ತದೆ. ಜನರ ನಡೆ-ನುಡಿಗಳಲ್ಲಿ ಹಾಡು ಕತೆಗಳಲ್ಲಿ ಗಾದೆ ಒಗಟುಗಳಲ್ಲಿ ನಂಬಿಕೆ ಸಂಪ್ರದಾಯಗಳಲ್ಲಿ ಅದು ಪ್ರತಿಫಲಿತವಾಗುವಂತೆಯೇ ಅವರ ಅಡುಗೆ ಸಂಪ್ರದಾಯಗಳಲ್ಲಿ ಬೇಟೆಯ ಕ್ರಮದಲ್ಲಿ ಸಾಂಪ್ರಾದಾಯಿಕ ರೀತಿಯ ವ್ಯವಸಾಯ ಪದ್ಧತಿಯಲ್ಲಿ, ವಿವಿಧ ಕೈಕಸುಬುಗಳಲ್ಲಿಯೂ ಅದು ಪಡಿಮೂಡಿಸುತ್ತದೆ. ಜನಪದ ಸಂಸ್ಕೃತಿಯನ್ನು ಅಧ್ಯಯನ ಮಾಡುವ ವಿದ್ವಾಂಸರು ಜನರ ವಾಚಿಕ ಸಂಪ್ರದಾಯಗಳನ್ನೂ, ಆಚರಣೆಗಳನ್ನು ಅಭ್ಯಾಸ ಮಾಡುವುದರ ಜೊತೆಗೆ ಭೌತಿಕ ವಸ್ತುವಿಶೇಷಗಳನ್ನೂ ಅಭ್ಯಸಿಸುತ್ತಾರೆ. ಜನರ ಸಂಸ್ಕೃತಿಯನ್ನು ಕಟ್ಟುವಲ್ಲಿ ಈ ವಸ್ತುವಿಶೇಷಗಳ ಪಾತ್ರವೂ ಗಣ್ಯವಾದುದೇ. ಇದು ಭೌತಿಕ ಸಂಸ್ಕೃತಿ.

ಮಾನವ ತನ್ನ ಬದುಕಿನ ಆಶೋತ್ತರಗಳನ್ನು ಮೌಖಿಕ ರೂಪದ ಸಾಹಿತ್ಯದಲ್ಲಿ ಅಭಿವ್ಯಕ್ತಗೊಳಿಸಿಕೊಂಡ, ಹಾಡಿ, ಆಡಿ ಅದರಿಂದ ಬದುಕಿಗೊಂದು ನೆಲೆಯನ್ನು ಕಂಡುಕೊಂಡ. ಇದರ ಜೊತೆಗೆ ಜೀವನೋಪಯೋಗಿಯಾದ ಹಲವು ಸಾಧನ ಸಲಕರಣೆಗಳನ್ನು ಸೃಷ್ಟಿಸಿಕೊಂಡ. ನಿಸರ್ಗದ ಮೂಲವಸ್ತುವನ್ನು ಆಧರಿಸಿ ಕಲ್ಲಿನಲ್ಲಿ, ಲೋಹದಲ್ಲಿ, ಮಣ್ಣಿನಲ್ಲಿ, ಮರದಲ್ಲಿ, ನಾರಿನಲ್ಲಿ ಬಗೆಬಗೆಯ ವಸ್ತುವಿಶೇಷಗಳಲ್ಲಿ ಇವುಗಲನ್ನು ತನ್ನ ಪ್ರಯೋಜನಾರ್ಥವಾಗಿ ಸೃಷ್ಟಿಸಿಕೊಳ್ಳುವಾಗ ಔಪಯೋಗಿಕ ದೃಷ್ಟಿಯ ಜೊತೆಗೆ ಕಲಾದೃಷ್ಟಿಯನ್ನು ಮೇಳವಿಸಿದ. ಹೀಗೆ ಮನುಷ್ಯ ತನಗೆ ತೋಚಿದ್ದನ್ನು ಬಾಯಿಯಿಂದಾಗಲಿ ಅಥವಾ ಕಲೆಯಿಂದಾಗಲಿ ತನ್ನ ಸಂಸ್ಕೃತಿ ಕಲೆಯನ್ನು ಇಂದಿಗೂ ಉಳಿಸಿಕೊಂಡು ಬಂದಿದ್ದಾನೆ. ಈ ಜನಪದ ಸಂಸ್ಕೃತಿಯನ್ನು ಉಳಿಸಿಕೊಂಡು ಬೆಳೆಯಿಸಿಕೊಂಡು ಬಂದವರು ಎಂದರೆ ಬುಡಕಟ್ಟು ಮತ್ತು ಅಲೆಮಾರಿ ಜನಾಂಗಗಳು. ನಾನು ಈ ಅಧ್ಯಯನದಲ್ಲಿ ಶಿಳ್ಳೇಕ್ಯಾತರ ಕಲೆಗಳನ್ನು ಕುರಿತು ವಿಶ್ಲೇಷಿಸಿದ್ದೇನೆ. ಕಾಲಾನುಕಾಲದಿಂದ ಬಂದಂತಹ ವಿಶಿಷ್ಟವಾದ ಮತ್ತು ವೈಭವಪೂರ್ಣವಾದ ಕಲೆಗಳು ಇಂದಿಗೂ ಸಹ ಕನ್ನಡ ಜನಪದ ಸಾಹಿತ್ಯದಲ್ಲಿ ಅತ್ಯಂತ ಉತ್ತುಂಗದಲ್ಲಿ ನೆಲೆಯೂರಿವೆ. ಉದಾಹರಣೆಗೆ ತೊಗಲುಗೊಂಬೆಯಾಟವಾಗಿರಬಹುದು. ನೃತ್ಯ, ವಾದ್ಯ, ಪ್ರಾಣಿಸಂವಹನ ಮತ್ತು ಶೃಂಗಾರ ಪ್ರಧಾನ ಕಲೆಗಳನ್ನು ತುಂಬಾ ಕಾಲದಿಂದ ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ. ಆದರೆ ಏಕಲವ್ಯನಗರದಲ್ಲಿರುವ ಶಿಳ್ಳೇಕ್ಯಾತರು ಪಟ್ಟಣಕ್ಕೆ ಸೇರಿದವರಿಂದ ಕೆಲವೊಂದು ಇಂದು ಕಲೆಗಳು ವಿನಾಶದ

ಅಂಚಿನಲ್ಲಿವೆ. ಆದರೂ ಸಹ ಹಿರಿಯರಾದವರು ಇಂದಿಗೂ ಆ ಕಲೆಗಳನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಅವುಗಳನ್ನು ಕೆಲವೊಂದನ್ನು ಈ ಕೆಳಗೆ ವಿವರಿಸಿದ್ದೇನೆ.

**ತೊಗಲುಗೊಂಬೆಯಾಟ:** ತೊಗಲುಗೊಂಬೆಯಾಟವು ಕರ್ನಾಟಕದ ಜನಪದ ರಂಗಭೂಮಿಯ ಒಂದು ಪ್ರಮುಖ ಅಂಗವಾಗಿದೆ. ಕರಾವಳಿ ಮತ್ತು ಮಲೆನಾಡು ಭಾಗಗಳ ಹೊರತು ಕರ್ನಾಟಕದ ಉಳಿದೆಲ್ಲ ಕಡೆಗಳಲ್ಲೂ ಜೀವಂತವಾಗಿರುವ ಈ ಕಲೆ ಯಕ್ಷಗಾನ ಬಯಲಾಟಗಳಿಗಿಂತ ಸ್ವಲ್ಪ ಭಿನ್ನವಾದದ್ದು ಮತ್ತು ವಿಶಿಷ್ಟವಾದದ್ದು. ಆ ಎರಡು ಕಲೆಗಳು ಎಷ್ಟೋ ಹರಕೆಗಳನ್ನು ತುಂಬಿಕೊಳ್ಳಲು ಸಮರ್ಥವಾದದ್ದು. ಸೂತ್ರದ ಗೊಂಬೆಯಾಟ, ಬಯಲಾಟಗಳಲ್ಲಿ ಗೊಂಬೆಗಳಾಗಲೀ, ಪಾತ್ರಗಳಾಗಲೀ ತೆರೆದ ರಂಗಮಂದಿರದಲ್ಲಿ ನರ್ತಿಸಬೇಕಾಗುತ್ತದೆ ಮತ್ತು ಅಭಿನಯಿಸಬೇಕಾಗುತ್ತದೆ. ತೊಗಲುಗೊಂಬೆಯಾಟದ ಅಸ್ಪಷ್ಟತೆ ಸ್ಪಷ್ಟತೆ ನಾಟಕದ ಆಸ್ವಾದನೆಗೆ ಅಗತ್ಯವಾದ ವಾತಾವರಣವನ್ನು ಕಲ್ಪಿಸುವಲ್ಲಿ ಎಷ್ಟೋ ಸಂದರ್ಭದಲ್ಲಿ ವಿಫಲವಾಗುತ್ತದೆ. ತೊಗಲು ಗೊಂಬೆಯಾಟದ ಕಲ್ಪನೆಯೇ ಬೇರೆ. ತೆರೆಯ ಹಿಂದೆ ವರ್ಣಮಯ ಲೋಕವನ್ನು ಸೃಷ್ಟಿಸುವ ಈ ಕಲೆ ಪ್ರೇಕ್ಷಕರನ್ನು ಸಂಪೂರ್ಣವಾಗಿ ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಆಡುವವರಾಗಲೀ, ಆಡಿಸು-ವವರಾಗಲೀ, ಹಿಮ್ಮೇಳದವರಾಗಲೀ, ಮುಮ್ಮೇಳದವರಾಗಲೀ, ಯಾರೂ ಸುಳಿವು ಕೊಡದಂತೆ ರಂಗಮಂಟಪದಲ್ಲಿ ಸೇರಿಕೊಳ್ಳುವುದರಿಂದ ತೆರೆಯ ಮೇಲೆ ಹೊರತಾಗಿ ಉಳಿದೆಡೆಯಲ್ಲೆಲ್ಲ ಕತ್ತಲು ಆವರಿಸಿರುವುದರಿಂದ ಗೊಂಬೆಯಾಟ ಪ್ರದರ್ಶನ ನೈಜ ಆವರಣವನ್ನು ಕಲ್ಪಿಸಿಕೊಡುತ್ತದೆ. ಉಳಿದ ಆಟಗಳಲ್ಲಿ ಅಸಾಧ್ಯವಾದ ಎಷ್ಟೋ ಅದ್ಬುತಗಳನ್ನು ತೊಗಲುಗೊಂಬೆಯಾಟ ಇಲ್ಲಿ ಸೃಷ್ಟಿಸುತ್ತದೆ.

**ತೊಗಲುಗೊಂಬೆಯಾಟದ ಪೂರ್ವ ತಯಾರಿ:** ಮೇಲೆ ತಿಳಿಸಿದ ಹಾಗೆ ಈ ತೊಗಲುಗೊಂಬೆಯಾಟಕ್ಕೆ ತನ್ನದೇ ಆದ ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಬದುಕಿನಲ್ಲಿ ತನ್ನದೇ ಆದ ಸಾರ್ವತ್ರಿಕ ಸದಾಭಿಪ್ರಾಯವಿದೆ. ಸಾಮಾನ್ಯ ಜನರು ಗಾಳಿ, ಮಳೆ, ಗುಡುಗು, ಸಿಡಿಲು, ಬೇನೆ-ಬೇಸರಿಕೆಗಳಿಗೆ ಭಯಭೀತರಾಗಿ ದಾರಿ ಕಾಣದಾದಾಗ ಈ ಗೊಂಬೆಯಾಟ ಆಡಿಸಲು ದೇವರಿಗೆ ಹರಕೆ ಹೊರುವ ಸಂಪ್ರದಾಯವಿದೆ. ಹಿಂದಿನ ಕಾಲದಲ್ಲಿ ಶ್ರೀಸಾಮಾನ್ಯನಿಂದ ಹಿಡಿದು ರಾಜಮಹಾರಾಜರವರೆಗೆ ಗೊಂಬೆಯಾಟಗಳನ್ನು ಆಮಂತ್ರಿಸಿ, ಗೊಂಬೆಯಾಟದ ಪ್ರದರ್ಶನಕ್ಕೆ ಪ್ರೋತ್ಸಾಹಿಸಿ ಸಂತೋಷಪಟ್ಟು ದೇವರ ಅನುಗ್ರಹಕ್ಕೆ ಪಾತ್ರರಾಗುತ್ತಿದ್ದರು.

ಶಿಳ್ಳೇಕ್ಯಾತರು ತಮಗೆ ಹಂಚಿಕೆಯಾದ ಊರಿಗೆ ಹೋಗಿ ಗೌಡ, ಪಟೇಲರಿಂದ ಗೊಂಬೆಯಾಟ ಆಡಲು ಅನುಮತಿ ಪಡೆದುಕೊಂಡು ತಮ್ಮ ಪ್ರದರ್ಶನಕ್ಕೆ ಬೇಕಾದ ಎಣ್ಣೆ, ಹತ್ತಿ, ತಟ್ಟೆಗಳು ಹಾಗೂ ಊರ ಮಧ್ಯದಲ್ಲಿರುವ ಅಗಲವಾದ ಸ್ಥಳ ಹಾಗೂ ಅದಕ್ಕೆ ಬೇಕಾದ ಕಟ್ಟಿಗೆ ಹಾಗೂ ತಾಡಪತ್ರಗಳನ್ನು ಪಡೆದು ಮತ್ತು ತಮ್ಮ ಹತ್ತಿರವಿರುವ ರಂಗಸಜ್ಜಿಕೆಯ ಸಾಮಾನುಗಳನ್ನು ತೆಗೆದುಕೊಂಡು ದಿನವಿಡೀ ಅದರ ವ್ಯವಸ್ಥೆ ಮಾಡಿ ರಾತ್ರಿ ೯ ಅಥವಾ ೧೦ ಗಂಟೆಗೆ ತೊಗಲುಗೊಂಬೆ ಆಟವನ್ನು ಪ್ರಾರಂಭಿಸುತ್ತಿದ್ದರು.

ಇಲ್ಲಿಯ ರಂಗಭೂಮಿ ಹಲವಾರು ಕಲೆಗಳ ಸಂಗಮ. ಅದರ ಜೀವಾಳ ತೊಗಲುಗೊಂಬೆಯಾಟ. ಕಾಮನಬಿಲ್ಲಿನಂತೆ ರಸ ಒಸರಿಸುವ ಲಲಿತ ಕಲೆಗಳ ಮೇಳ, ಮನಸ್ಸನ್ನು ರಂಜಿಸಿ ಆತ್ಮವನ್ನು ಮೇಲೆತ್ತುವ ಸಾಹಿತ್ಯ, ಸಂಗೀತ, ನೃತ್ಯ ಇವೆಲ್ಲವುಗಳ ಮೇಳೈಕೆಯಿಂದ ಮೈತಳೆದು ಬಂದುದು. ಈ ತೊಗಲುಗೊಂಬೆಯಾಟ ಬಹು ಜನಪ್ರಿಯವಾದ ಜನಪದರ ದೃಶ್ಯಕಾವ್ಯ, ಬೇರೆ ಬೇರೆ ಭಾವಗಳನ್ನು ಮೂಡಿಸಿ, ನೋಟಕನ ಬಗೆಯಲ್ಲಿ ನವರಸಗಳನ್ನು ಪಸರಿಸುವುದರಿಂದಾಗಿ ತೊಗಲುಗೊಂಬೆ ಆಟವು ಒಂದು ಕಲಾ ಪ್ರಕಾರವೆನ್ನಿಸದೆ ಇರಲಾರದು. ಈ ರಂಗಸಜ್ಜಿಕೆಯು ಭವ್ಯತೆ ರಮ್ಯತೆಗಳನ್ನು ಒಳಗೊಂಡಿರುತ್ತದೆ.

**ಸ್ಥಳದ ಆಯ್ಕೆ ಮತ್ತು ದಿಕ್ಕು:** ಇವರು ಸಾಮಾನ್ಯವಾಗಿ ಊರಿನ ಮುಂಭಾಗದಲ್ಲಿ ಸ್ವಲ್ಪ ಎತ್ತರದಲ್ಲಿರುವ ಸ್ಥಳ, ಊರಿನ ಛಾವಡಿ, ಪಂಚಾಯಿತಿ ಕಟ್ಟೆ, ಇಲ್ಲವೇ ಊರಗೌಡರ ಮನೆಯ ಕಟ್ಟೆಗಳನ್ನು ತಮ್ಮ ರಂಗಭೂಮಿಯನ್ನಾಗಿಸಿಕೊಳ್ಳುವರು. ಅಲ್ಲಿ ಅವರು ಉತ್ತರಕ್ಕೆ ಅಥವಾ ಪೂರ್ವಕ್ಕೆ ಮುಖವಾಗಿರುವಂತೆ ರಂಗಸಜ್ಜಿಕೆಯನ್ನು ಹೂಡುವುದು ರೂಢಿ. ಇಂತಹ ರಂಗಸಜ್ಜಿಕೆಯನ್ನು ಸಿದ್ಧಪಡಿಸುವಾಗ ವಾರ, ತಿಥಿ, ನಕ್ಷತ್ರ ನೋಡುವುದು ಶಿಳ್ಳೇಕ್ಯಾತರ ನಂಬಿಕೆ. ಭಾನುವಾರ, ಸೋಮವಾರ ಬಡಗ (ಉತ್ತರ) ದಿಕ್ಕು, ಮಂಗಳವಾರ, ಬುಧವಾರ ಮೂಡಲ (ಪೂರ್ವ) ದಿಕ್ಕು, ಗುರುವಾರ, ಶುಕ್ರವಾರ, ಶನಿವಾರ ಪಡುವಣ (ಪಶ್ಚಿಮ) ದಿಕ್ಕಿಗೆ ಮುಖವಾಗಿರುವಂತೆ ಅಶ್ವಿನಿ, ರೋಹಿಣಿ ಮೃಗಶಿರ, ಪುಷ್ಯ, ರೇವತಿ ನಕ್ಷತ್ರವಿರುವಂತೆ ಹೀಗೆ ವಾರ ನಕ್ಷತ್ರ ನೋಡುವುದರ ಮುಖಾಂತರ ಆಯಾ ದಿಕ್ಕಿಗೆ ಮುಖಮಾಡಿ ರಂಗಸಜ್ಜಿಕೆ ಕಟ್ಟುತ್ತಾರೆ. (ಗುಂಡುರಾಜ ಹೂವಿನಹಳ್ಳಿ ಕಾವಲು, ಡಾ.ದೊಡ್ಡಮನಿ ಮತ್ತು ಸಾಸನೀತ್)

**ರಂಗಸಜ್ಜಿಕೆ ನಿರ್ಮಾಣ:** ಕರ್ನಾಟಕದಲ್ಲಿ ಗೊಂಬೆಗಳನ್ನು ಕುಳಿತುಕೊಂಡು ಕುಣಿಸುವುದರಿಂದ ಆರು ಅಡಿ ಎತ್ತರದ ಬಿದಿರಿನ ಕಂಬಗಳನ್ನು ನೆಟ್ಟು, ಎಂಟು ಅಡಿ ಉದ್ದವಿರುವ ಮತ್ತು ಮೂರು ಅಡಿ ಅಗಲವಿರುವ ಗಳಗಳನ್ನು ಮೇಲ್ಭಾಗದಲ್ಲಿ ಮತ್ತು

ಕೆಳಭಾಗದಲ್ಲಿ ಕಟ್ಟುವರು, ರಂಗದ ಮುಂಭಾಗದ ಕೆಳಗೆ ಎರಡೂವರೆ ಅಡಿಯಷ್ಟು ಕಂಬಳಿಯನ್ನು ಇನ್ನುಳಿದ ಸುತ್ತಲಿನ ಮೂರು ಭಾಗಕ್ಕೆ ಕೌದಿ ಅಥವಾ ಚಾಪೆಯನ್ನು ಕಟ್ಟಿ ಮರೆ ಮಾಡುವರು. ಮೇಲ್ಭಾಗವನ್ನು ತಾಡಪತ್ರಿಯಿಂದ ಮುಚ್ಚುವರು. ಹಾಗೇ ಇದು ಒಂದು ಛಾಯಾ ಆಟವಾಗಿರುವುದರಿಂದ ಛಾಯಾ ಆಟದ ಪ್ರತಿರೂಪ. ಪ್ರದರ್ಶನ ಯಶಸ್ವಿಯಾಗಬೇಕಾದರೆ, ಕತ್ತಲನ್ನು ಮಾಡಿಸಬೇಕು. ರಂಗಸ್ಥಳದ ಒಳಗಿನ ಮತ್ತು ಹೊರಗಿನ ಪ್ರಪಂಚಕ್ಕೆ ಕಾಣದ ದೀಪ ಬೆಳಕೊಂದನ್ನು ಹೊರತುಪಡಿಸಿ, ಬೇರಾವ ಬೆಳಕು ಇರಬಾರದು. ಇಲ್ಲಿ ಸಾಮಾನ್ಯವಾಗಿ ಹೊಂಗೆ ಎಣ್ಣೆ ಅಥವಾ ಔಡಲ ಎಣ್ಣೆಯನ್ನು ತುಂಬಿರುವ ದೊಡ್ಡದಾದ ಮಣ್ಣಿನ ಅಥವಾ ಬಳಪದ ಕಲ್ಲಿನ ದೀಪವನ್ನು ಬಳಸುವರು. ಈ ಹಣತೆಯೊಳಗೆ ದಪ್ಪ ಬಟ್ಟೆಯ ಕಕ್ಕಡ (ಬತ್ತಿ)ವನ್ನು ನೆನಸಿ ಪರದೆಯ ಹಿಂಭಾಗದಲ್ಲಿ ಎರಡು ಅಡಿ ದೂರದಲ್ಲಿ ಸಂದರ್ಭಗಳಿಗೆ ಅನುಗುಣವಾಗಿ ಮೂರು, ಐದು ದೀಪಗಳನ್ನು ಬಳಸುವರು. ತೂಗುಬಿಟ್ಟ ದೀಪದ ಬೆಳಕು ತೊಗಲುಗೊಂಬೆಗಳ ಮೇಲೆ ಬಿದ್ದು, ಆ ಗೊಂಬೆಯ ಪ್ರತಿಬಿಂಬ ಬಿಳಿಯ ಪಂಚೆಯ ಮೇಲೆ ಅದ್ಭುತವಾಗಿ ಮೂಡುವುದು. ತೊಗಲುಗೊಂಬೆಗಳ ಅಪೂರ್ವ ವರ್ಣ ಪ್ರಜ್ವಲಿಸಿ ಇದರಿಂದ ನೋಡುಗರ ಮನಸ್ಸು ಕಥೆಗಳ ಮೇಲೆ, ಪಾತ್ರಗಳ ಮೇಲೆ ಕೇಂದ್ರೀಕೃತಗೊಳ್ಳುವುದು.

ಪ್ರದರ್ಶನ ಆರಂಭದಿಂದ ಅಂತ್ಯದವರೆಗೆ ಪರದೆಯ ಹಿಂದೆ ವಾದ್ಯ, ಗಾಯನ ಮತ್ತು ಗೊಂಬೆಗಳನ್ನು ಆಡಿಸುವರು ರಂಗಸಜ್ಜಿಕೆಯ ಒಳಭಾಗದಲ್ಲಿಯೇ ಕುಳಿತಿರುತ್ತಾರೆ. ಎದುರಿನ ಬಿಳಿಪರದೆಯ ಕೆಳ ಅರ್ಧಭಾಗವನ್ನು ಕಂಬಳಿಯಿಂದ ಕಟ್ಟಿರುವುದರಿಂದ ಯಾರೂ ಪ್ರೇಕ್ಷಕರ ಕಣ್ಣಿಗೆ ಕಾಣಿಸುವುದಿಲ್ಲ. ಗೊಂಬೆಯ ಪೆಟ್ಟಿಗೆ, ಹಾಡುವವರು, ಮಕ್ಕಳುಮರಿ, ಇಡೀ ತೊಗಲುಗೊಂಬೆಯಾಟಗಾರರ ಸಮೂಹವೇ ರಂಗಮಂದಿರದ ಒಳಗಿರುತ್ತದೆ. ಆದರೆ ಈಗೀಗ ಕಥಾ ನಿರೂಪಣೆ ಮಾಡುವವನನ್ನು ಹಾಗೂ ಗೊಂಬೆಯನ್ನು ಕುಣಿಸುವವರನ್ನು ಬಿಟ್ಟರೆ ಉಳಿದ ವಾದ್ಯಮೇಳದವರನ್ನು, ಹಾಡುವವರನ್ನು ರಂಗಮಂದಿರದ ಹೊರಗೆ ಕೂಡ್ರಿಸುವರು.

ಆಂದ್ರಪ್ರದೇಶದಲ್ಲಿ ಹಾಗೂ ಕರ್ನಾಟಕದ ಗಡಿ ಜಿಲ್ಲೆಗಳಲ್ಲಿ ಬಳಸುವ ಗೊಂಬೆಗಳು ಆಳೆತ್ತರದ ಗೊಂಬೆಗಳಾಗಿರುತ್ತವೆ. ಈ ಗೊಂಬೆಗಳು ಗಾತ್ರದಲ್ಲಿ ದೊಡ್ಡದಾಗಿರುತ್ತವೆ. ಹಾಗೆಯೇ ವೈಭವ ಪೂರಿತವಾಗಿರುತ್ತವೆ. ಕೆಲವು ಗೊಂಬೆಗಳು ಆಕಾರದಲ್ಲಿ ಮನುಷ್ಯರ ಎತ್ತರಕ್ಕಿಂತಲೂ ದೊಡ್ಡದಾಗಿರುತ್ತವೆ. ಆದರ ಈ ಗೊಂಬೆಗಳನ್ನು ಕುಣಿಸಬೇಕಾದರೆ ಸೂತ್ರದಾರ ನಿಂತುಕೊಳ್ಳುವನು ಮತ್ತು ಪಾತ್ರಗಳ

ಜೊತೆಯಲ್ಲಿ ಅವನು ಕುಣಿಯುವನು. ಬಯಲಾಟದ ಪಾತ್ರದಾರಿಯಂತೆ ಕಾಲಿಗೆ ಗೆಜ್ಜೆಯನ್ನು ಕಟ್ಟಿಕೊಂಡಿರುತ್ತಾನೆ. ಆದ್ದರಿಂದ ಇದರ ರಂಗಸಜ್ಜಿಕೆಯನ್ನು ಬಯಲಾಟದ ರಂಗಸಜ್ಜಿಕೆಯಂತೆ ಕೆಳಭಾಗದಲ್ಲಿ ಹಲಗೆಯ ಅಟ್ಟಕಟ್ಟುವರು. ಮುಂಭಾಗವನ್ನು ಬಿಳಿಯ ಪಂಚೆ ಮತ್ತು ಕೆಳಗರ್ದ ಕರಿ ಕಂಬಳಿಯನ್ನು ಕಟ್ಟಿರುವರು. ಉಳಿದ ಮೂರು ಕಡೆ ಮರೆ ಮಾಡುವರು. ಈ ರಂಗಸಜ್ಜಿಕೆಯ ಅಲಂಕಾರಕ್ಕಾಗಿ ಮಾವಿನ ಎಲೆಯ ತೋರಣ ಬಳಸುವರು. ಪ್ರಾದೇಶಿಕವಾಗಿ ಉಳಿದೆಲ್ಲ ತಂತ್ರವನ್ನು ಯಥಾವತ್ತಾಗಿ ಅಳವಡಿಸಿಕೊಂಡಿದ್ದಾರೆ.

**ಪ್ರದರ್ಶನ:** ಗೊಂಬೆಯಾಟದಲ್ಲಿ ಪ್ರಮುಖವಾದ ಪಾತ್ರವೆಂದರೆ ಶಿಳ್ಳೇಕ್ಯಾತ. ಇದು ಒಂದು ಮಾಂತ್ರಿಕ ಗೊಂಬೆ. ಅದರ ರೂಪ ನಗೆಯನ್ನು ಉಕ್ಕಿಸುವಂತಿರುತ್ತದೆ. ಇದು ಒಂದು ದೊಡ್ಡ ದೇಹದ, ಗಿಡ್ಡ ಮೂಗಿನ, ಡೊಳ್ಳು ಹೊಟ್ಟೆಯನ್ನು ಹೊಂದಿರುವ ಹಾಗೂ ಹಿಂದೆ ಜುಟ್ಟು, ಎರಡೂ ಬದಿಯಲ್ಲಿ ಜನಿವಾರ ಇತ್ಯಾದಿ ಆಕಾರದೊಂದಿಗೆ ಜನರ ಕಣ್ಮನ ಸೆಳೆಯುವಂಥ ಆಕಾರ ಹೊಂದಿರುತ್ತದೆ. ರಾಮ/ಗಣಪತಿ/ಸರಸ್ವತಿಯರ ನಂತರ ಬಯಲಾಟದಲ್ಲಿ ಪ್ರಥಮವಾಗಿ ಸಾರಥಿ ಪಾತ್ರ ಬರುವಂತೆ ತೊಗಲುಗೊಂಬೆಯಾಟದಲ್ಲಿ ಕಪ್ಪು ಅಥವಾ ತೀರಕೆಂಪು ಬಣ್ಣವುಳ್ಳ ಈ ಗೊಂಬೆ ಕಾಣಿಸಿಕೊಳ್ಳುತ್ತದೆ. ಇದು ಈ ರಂಗಕಲೆಗೆ ಒಂದು ಚೈತನ್ಯ ಶಕ್ತಿಯಾಗಿರುತ್ತದೆ. ಇದರಿಂದ ಹಾಸ್ಯ ಮೂಡಿಸಿ, ಪ್ರೇಕ್ಷಕರು ನಗುವಂತೆ ಮಾಡುವುದು ಸೂತ್ರದಾರನ ಕಲೆಯಾಗಿರುತ್ತದೆ. ಈ ಗೊಂಬೆಯೊಂದಿಗೆ 'ಬಂಗಾರಕ್ಕ' ಎಂಬ ಒಂದು ಸ್ತ್ರೀ ರೂಪದ ಗೊಂಬೆಯು ಶಿಳ್ಳೇಕ್ಯಾತನ ಸತಿಯಾಗಿ ರಂಗದ ಮೇಲೆ ಬರುವುದು. ಈ ಎರಡೂ ಪಾತ್ರಗಳು ಹಾಸ್ಯಪಾತ್ರಗಳಾಗಿ ತಮ್ಮ ಅಶ್ಲೀಲ ಮಾತುಗಳಿಂದ ಸಹೃದಯನನ್ನು ನಗೆಗಡಲ್ಲಲಿ ಮುಳುಗುವಂತೆ ಮಾಡುತ್ತವೆ. ಆಟದ ನಂತರ ಉಪಜೀವನ ಮಾರ್ಗಕ್ಕೆ ನೆರವಾದ ಕುಲಜನಾದ ರಾಮನನ್ನು ನೆನೆದು ಬಿರುದುವಾಳ್ಳುದಿ ಭಿಕ್ಷುಮುಮಾದಿ' (ಬಿರುದು ಆತನದು, ಅದರ ಫಲವಾದ ಭಿಕ್ಷೆ ನಮ್ಮದು) ಎಂದು ಅಂದಿನ ಆಟಕ್ಕೆ ಕಾರಣರಾದ ಊರಿನ ಗೌಡನನ್ನು ಕೊಂಡಾಡುವರು. ನಂತರ ಊರ ಜನರ ಇಚ್ಛೆಗನುಸಾರವಾಗಿ ರಾಮಾಯಣ, ಮಹಾಭಾರತ, ಭಾಗವತಗಳಿಗೆ ಸಂಬಂಧಿಸಿದ ರಾಮಾಯಣದ ಪುತ್ರಕಾಮೇಷ್ಟಿಯಾಗ, ಸೀತಾಕಲ್ಯಾಣ, ಪಾದುಕಾ ಪಟ್ಟಾಭಿಷೇಕ, ವಾಲಿಸುಗ್ರೀವರ ಕಾಳಗ, ಇಂದ್ರಜಿತು ಕಾಳಗ, ಐರಾವತರಣ, ಮೈರಾವಣ ಕಾಳಗ, ರಾಮರಾವಣರ ಯುದ್ಧ ಅಥವಾ ಮಹಾಭಾರತದ ಯಾವುದೇ ಸನ್ನಿವೇಶವನ್ನು ಆಯ್ದುಕೊಂಡು ಆಟವನ್ನಾರಂಭಿಸುವರು. ಗೊಂಬೆರಾಮನ ಸಮೂಹವೆಲ್ಲ ಸೇರಿ

ಹೆಣ್ಣಿನ ಪಾತ್ರಕ್ಕೆ ಹೆಣ್ಣು, ಗಂಡಿನ ಪಾತ್ರಕ್ಕೆ ಗಂಡು, ಯುವಕ, ಯುವತಿಯರ ಪಾತ್ರಕ್ಕೆ ತನ್ನ ಮಕ್ಕಳಾದ ಯುವಕ, ಯುವತಿಯರು ಮತ್ತು ಬಾಲಪಾತ್ರಕ್ಕೆ ಬಾಲರು ಧ್ವನಿ ಕೊಡುವುದು ಸಾಮಾನ್ಯವಾಗಿದೆ. ಒಂದು ಪಾತ್ರಕ್ಕೆ ಒಬ್ಬನು ಮುಮ್ಮೇಳ ಹಾಡಿದರೆ, ಉಳಿದವರು ಹಿಮ್ಮೇಳ ಹಾಡುವರು. ಗೊಂಬೆಗಳನ್ನು ಕುಣಿಸುವವರು ತಮ್ಮ ಎರಡೂ ಕೈಗಳಿಗೆ ಗೆಜ್ಜೆಯನ್ನು ಕಟ್ಟಿಕೊಂಡಿರುತ್ತಾರೆ. ಮಕ್ಕಳು ಯಾರಾದರೊಬ್ಬರು ತಾಳ ಹಾಕುವರು. ಸಂಭಾಷಣೆ ಕೆಲವೊಮ್ಮೆ ಮರಾಠಿ ಭಾಷೆ ಬೆರತ ಕನ್ನಡವಾಗಿರುತ್ತದೆ. ಜನರನ್ನು ಹೆಚ್ಚು ಆಕರ್ಷಿಸುವುದು ಅವರ ಗ್ರಾಮ್ಯ ಅಶ್ಲೀಲ ಭಾಷೆ. ಆದರೆ ಈ ಅಶ್ಲೀಲ ಕೆಟ್ಟ ತೃಪ್ತಿಗಾಗಿ ಅಲ್ಲ, ಸಾಮಾಜಿಕ ವಿಡಂಬನೆಗಾಗಿ, ಇಲ್ಲಿ ಭಾಷೆ ಕೇವಲ ಸಾಂಕೇತಿಕವಾಗಿರುತ್ತದೆ. ಅವು ಅಲ್ಲಲ್ಲಿ ಹೊಸರುಚಿಯಂತೆ ಕಂಡುಬಂದರೂ ಸಂಗೀತದ ಓಘದಲ್ಲಿ ಕರಗಿ ಹೋಗುತ್ತವೆ. ಕಥೆ, ಸಂಗೀತ, ಭಾವ ಪ್ರಧಾನವಾಗಿರುತ್ತವೆ. ಕೆಲವು ವೇಳೆ ಹಳ್ಳಿಯಲ್ಲಿ ನಡೆಯುವ ಅವ್ಯವಹಾರವನ್ನು ಟೀಕಿಸಲು ಶಿಳ್ಳೇಕ್ಯಾತರು ಉರ್ದು ಭಾಷೆಯ ಪದಗಳನ್ನು ಬಳಸುವುದುಂಟು. ಕೊನೆಯಲ್ಲಿ ಜನರ ಮನಸ್ಸಿನಲ್ಲಿ ಉಳಿಯುವುದು ಕಥಾ ಪ್ರಧಾನವಾದ ಧ್ವನಿ ಮಾತ್ರ.

**ಪ್ರದರ್ಶನದ ಮುಖ್ಯ ಅಂಶಗಳು:** ಕಥೆ ಜನಸಾಮಾನ್ಯರಿಗೆ ತಿಳಿಯುವಂತಿರುತ್ತದೆ. ಅಂತಹ ಕಥೆಗಳನ್ನು ಶಿಳ್ಳೇಕ್ಯಾತರು ಹೆಚ್ಚು ಆಯ್ದುಕೊಳ್ಳುತ್ತಾರೆ. ಆಟಗಾರನಿಗೆ ಕಥೆ ಚನ್ನಾಗಿ ತಿಳಿದಿದ್ದಾಗಿರುತ್ತದೆ. ರಂಗದ ಮೇಲೆ ಒಂದಾದ ಮೇಲೆ ಒಂದರಂತೆ ಪಾತ್ರಗಳ ಸವಾಲು ಜವಾಬು ನಡೆಯುವಾಗ, ಭೀಮ, ದುರ್ಯೋಧನರು ಅಥವಾ ಕೃಷ್ಣಾರ್ಜುನರು ರಾಮಲಕ್ಷ್ಮಣರು, ರಾಮಸೀತೆ, ರಾಮರಾವಣರು, ಇಂದ್ರಜಿತು ಲಕ್ಷಣ ಒಟ್ಟಾಗಿ ಬರುವಾಗ ಎರಡೂ ಗೊಂಬೆಗಳ ಅಭಿನಯ ಅವುಗಳ ಕೈಕಾಲು, ಮುಖಭಂಗಿ, ಕೈಯಿಂ ಮೀಸೆ ತಿರುಗಿಸುವುದು, ಕಣ್ಣೀರು ಒರೆಸಿಕೊಳ್ಳುವುದು ಇತ್ಯಾದಿಗಳನ್ನು ಒಟ್ಟಿಗೆ ತೋರಿಸುವರು.

ಶಿಳ್ಳೇಕ್ಯಾತರು ವಿದ್ಯಾವಂತನಾಗಿರುವುದಿಲ್ಲವಾದರೂ ಅವನ ಜ್ಞಾಪಕಶಕ್ತಿ ಅದ್ಭುತವಾಗಿರುತ್ತದೆ. ಹೀಗಾಗಿ ಪುರಾಣ ಕಥೆಗಳು, ಸಂಪೂರ್ಣ ರಾಮಾಯಣ, ಸಂಪೂರ್ಣ ಮಹಾಭಾರತ, ದಶಾವತಾರ ಕಥೆಗಳು, ರಾಮಾಂಜನೇಯ ಯುದ್ಧ, ಗರುಡ ಗರ್ವಭಂಗ ಇತ್ಯಾದಿ ಆಟಗಳ ಕಥೆಯನ್ನು ಬಾಯಿಪಾಠವಾಗಿ ಸರಾಗವಾಗಿ ಹೇಳುತ್ತಾನೆ. ಈ ಎಲ್ಲಾ ಕಥೆಗಳನ್ನು, ಯಕ್ಷಗಾನದ ಮಟ್ಟಿನಲ್ಲಿಯೇ ಪ್ರಸ್ತುಪಡಿಸುವರು. ಮಧ್ಯ ಮಧ್ಯ ಕುಮಾರವ್ಯಾಸನ ಪದ್ಯಗಳನ್ನು ಹಾಡುವರು. ಅಲ್ಲದೆ ಅಲ್ಲಲ್ಲಿ ಮರಾಠಿ ಪದ್ಯ, ತೆಲಗುಪದ್ಯ, ಒಗಟು, ಗಾದೆ ಮಾತುಗಳನ್ನು ಸೇರಿಸುವರು.

ಶಿಳ್ಳೇಕ್ಯಾತರು ಮೌಕಿಕ ಸಾಹಿತ್ಯದಲ್ಲಿ ಬಳಸುವ ಶೈಲಿ ವ್ಯಾಕರಣ ಶುದ್ಧವಲ್ಲ, ಸುಸಂಸ್ಕೃತವೂ ಅಲ್ಲ. ಈ ಗೊಂಬೆರಾಮನಲ್ಲಿ ದಾಕ್ಷಿಣ್ಯ, ಮುಚ್ಚು ಮರೆ ಇರುವುದಿಲ್ಲ. ಯಾವುದನ್ನು ಎಲ್ಲಿಗೆ ಮುಟ್ಟಿಸಬೇಕೋ ಅಲ್ಲಿಗೆ ಮುಟ್ಟಿಸುವ ಚಾಕಚಕ್ಯತೆಯುಳ್ಳವನು.

ಸನ್ನಿವೇಶದ ಹಾಸ್ಯಗಳು ಅವನ ಕಥಾಸ್ವಾರಸ್ಯವನ್ನು ಹೆಚ್ಚಿಸುವ ವಸ್ತು-ಗಳಾಗಿರುತ್ತವೆ. ಯುದ್ಧದ ಸನ್ನಿವೇಶದಲ್ಲಿ ಅವನ ಆರ್ಭಟ, ಹುಮ್ಮಸ್ಸು ಮುಗಿಲು ಮುಟ್ಟುತ್ತದೆ. ಇದು ಮನರಂಜನ ಕಲೆಯಾದರೂ ಒಮ್ಮೊಮ್ಮೆ ಆಚರಣೆಯ ಹಂತಕ್ಕೂ ತಲುಪುವುದು. (ಆಧಾರ, ಕೃಪೆ: ದೊಡ್ಡಮನಿ ಮತ್ತು ಸಾಸನೀಶ್)

ಒಟ್ಟಾರೆಯಾಗಿ ತೊಗಲುಗೊಂಬೆಯಾಟ ಒಂದು ಜನಪದ ಕಲೆಗಳಲ್ಲಿ ಅಗ್ರಗಣ್ಯವಾದ ಸ್ಥಾನವನ್ನು ಪಡೆದಿದ್ದು, ಅದರಿಂದಲೇ ಶಿಳ್ಳೇಕ್ಯಾತ ಸಮುದಾಯ ಗುರುತಿಸಿಕೊಂಡಿದ್ದು. ಈ ಒಂದು ಆಟ ತನ್ನದೇ ಆದ ಸಾಹಿತ್ಯ ಕಲೆ, ಸಂಗೀತ ಹಾಗೂ ವಿಶಿಷ್ಟ ಸಂಪ್ರದಾಯ ಮತ್ತು ಸಂಸ್ಕೃತಿಯನ್ನೊಳಗೊಂಡಿದೆ. ಆದರೆ ಇಂದು ಅದು ಮರೆಮಾಚಿ ಹೋಗುವ ಸಂದರ್ಭ ಬಂದಿದೆ. ಕಾರಣ ಶಿಳ್ಳೇಕ್ಯಾತರು ನಗರ ಪ್ರದೇಶಕ್ಕೆ ವಲಸೆ ಬಂದು ಸಂಪೂರ್ಣವಾಗಿ ನಗರ ಸಮುದಾಯದಲ್ಲಿ ವಿಲೀನ ಹೊಂದಿ ತಮ್ಮ ದಿನ ನಿತ್ಯದ ಜೀವನೋಪಾಯಕ್ಕಾಗಿ ಹೊಸ ಹೊಸ ರೀತಿಯ ಕಸುಬುಗಳನ್ನು ಮಾಡಿಕೊಂಡು ಈ ಅಲೆಮಾರಿಯ ಕಸುಬುಗಳನ್ನು ಮರೆತು ಹೋಗುತ್ತಿದ್ದಾರೆ. ಅದರಂತೆ ಈ ಹೊಸ ತಲೆಮಾರಿನ ಜನರು ತಮ್ಮ ಪೂರ್ವಜರ ಕಸುಬುಗಳಿಗೆ ಜೋತು ಬೀಳದೆ ಬೇರೆ ಬೇರೆ ಕೆಲಸಗಳನ್ನು ಹುಡುಕಿಕೊಂಡು ಬಂದು ಒಂದು ಕಡೆ ನೆಲೆಯೂರುವ ಪ್ರಯತ್ನದಲ್ಲಿದ್ದಾರೆ. ಕಾರಣ ಈಗಿನ ಸಿನಿಮಾ ಜಗತ್ತು ಹಳ್ಳಿಹಳ್ಳಿಗೂ ಕಾಲಿಟ್ಟಿರುವುದರಿಂದ ಹಳೆಯ ತಲೆಮಾರಿನ ಈ ತೊಗಲುಗೊಂಬೆಯಾಟಕ್ಕೆ ಜನಮನ್ನಣೆ ಕಡಿಮೆಯಾಗಿದೆ. ಆದುದರಿಂದ ಶಿಳ್ಳೇಕ್ಯಾತರು ಜೀವನ ನಡೆಸುವುದು ತುಂಬಾ ಕಷ್ಟವಾಗಿದೆ. ಅವರು ಅದನ್ನು ಬಿಟ್ಟು ಬೇರೆ ಉದ್ಯೋಗಕ್ಕೆ ತೊಡಗುವುದು ಅನಿವಾರ್ಯವಾಗಿದೆ. ಆದರೆ ಇನ್ನೂ ಕುಲಕಸುಬುಗಳಿಗೆ ನಂಟು ಬಿದ್ದವರು ಸಿನಿಮಾ ದೃಶ್ಯಗಳನ್ನು ತೆಗೆದುಕೊಂಡು ಅದನ್ನೆ ಗ್ರಾಮ್ಯಭಾಷೆಯಲ್ಲಿ ಜನರೆದುರಿಗೆ ಹಾಸ್ಯರೂಪದಲ್ಲಿ ಪ್ರದರ್ಶಿಸಿ ತಮ್ಮ ಉಪಜೀವನವನ್ನು ನಡೆಸುತ್ತಿದ್ದಾರೆ. ಆದರೆ ಈ ಏಕಲವ್ಯ ನಗರದ ಬಹುತೇಕ ನಿವಾಸಿಗಳು ಇಂದು ಕೈಗಾರಿಕೆಯಲ್ಲಿ ಗಾರೆಕೆಲಸಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ಕೂಲಿಗಳಾಗಿ ಜೀವನ ನಡೆಸುತ್ತಿದ್ದಾರೆ.

**ಬಯಲಾಟಗಳು:** ಶಿಳ್ಳೇಕ್ಯಾತರಲ್ಲಿ ಇಂದಿಗೂ ಹಲವು ಪಂಗಡಗಳಲ್ಲಿ ಹಳ್ಳಿಹಳ್ಳಿಗೂ ಹೋಗಿ ಬಯಲಾಟಗಳನ್ನು ಕಲಿಸುವುದು ಹಾಗೂ ಸ್ವತಃ ತಾವೇ ಪ್ರದರ್ಶನ

ನೀಡುವುದಿದೆ. ತಮ್ಮ ಕುಟುಂಬದವರು ಅಥವಾ ಸಂಬಂಧಿಕರೊಡಗೂಡಿ ಹಲವಾರು ಸಣ್ಣಾಟ ಮತ್ತು ದೊಡ್ಡಾಟಗಳನ್ನು ಮಾಡುತ್ತಾರೆ.

**ಸಣ್ಣಾಟ:** ಸಣ್ಣಾಟ ಎಂದರೆ ಇದು ಜನಸಾಮಾನ್ಯರು ಆಡುವಂತಹ ಆಟ. ಸಣ್ಣ ಕಥೆಗಳನ್ನಾಧರಿಸಿ ಸಂಭಾಷಣೆ ಮತ್ತು ಸಂದರ್ಭಕ್ಕನುಸಾರವಾಗಿ ಹಾಡುಗಳು ಜೋಡಿಸಿ ಒಂದು ಕಥೆಯನ್ನು ರಚಿಸಿ ಕೆಲವು ಪಾತ್ರಗಳ ಕಥೆಯನ್ನು ನಿರ್ವಹಿಸುತ್ತದೆ. ಇವರು ಸಂಗ್ಯಾಬಾಳ್ಯಾ, ಕಬೀರ್‌ದಾಸ್, ಗಂಗಾ-ಜಮುನಾ, ಭಕ್ತಪ್ರಹ್ಲಾದ ಇಂತಹ ಸಣ್ಣ ಕಥೆಗಳನ್ನು ತೆಗೆದುಕೊಂಡು ಹಾಗೆ ಕೆಲವೇ ಕೆಲವು ಪಾತ್ರಗಳನ್ನಿಟ್ಟುಕೊಂಡು ಇಡೀ ರಾತ್ರಿ ಜನರನ್ನು ರಂಜಿಸುತ್ತಾರೆ. ಇವುಗಳು ನೀತಿ ಮತ್ತು ಹಾಸ್ಯ ಪ್ರಜ್ಞೆಯಿಂದ ಕೂಡಿದ್ದು ಅತ್ಯಂತ ಸ್ವಾರಸ್ಯಕರವಾಗಿರುತ್ತದೆ. ಇದಕ್ಕೆ ಹಿಮ್ಮೇಳ ಮತ್ತು ಮುಮ್ಮೇಳಗಳಿದ್ದು, ಸಂಗೀತವಾದ್ಯಗಳಾದ ಹಾರ್ಮೋನಿಯಂ ಚಳ್ಳಮ್ ಹಾಗೂ ಡಪ್ (ತೊಗಲಿನಿಂದ ಮಾಡಲ್ಪಟ್ಟ ಒಂದು ಬಾರಿಸುವ ಸಾಧನ) ಇದರಲ್ಲಿ ಅತ್ಯಂತ ಪ್ರಮುಖವಾದ ವಾದ್ಯಗಳಾಗಿರುತ್ತವೆ. ಹಲವು ಕುಟುಂಬಗಳು ತಮ್ಮ ಜೀವನೋಪಾಯದ ಸಾಧನಗಳಾಗಿ ಇಂತಹ ಆಟಗಳನ್ನು ಪ್ರದರ್ಶಿಸುತ್ತಾರೆ. ವಿಶೇಷವಾಗಿ ಜಾತ್ರೆಗಳಲ್ಲಿ ಮತ್ತು ಬೇಸಿಗೆಯಲ್ಲಿ ಹಳ್ಳಿ-ಹಳ್ಳಿಗೂ ಹೋಗಿ ಪ್ರದರ್ಶನ ನೀಡಿ ಅದರಿಂದ ಬಂದ ಹಣದಲ್ಲಿ ಜೀವನವನ್ನು ನಡೆಸುತ್ತಾರೆ.

**ದೊಡ್ಡಾಟ ಮತ್ತು ನಾಟಕಗಳು:** ಶಿಳ್ಳೇಕ್ಯಾತರಲ್ಲಿ ಕೆಲವರು ಹಳ್ಳಿಗಳಲ್ಲಿ ಈ ದೊಡ್ಡಾಟಗಳನ್ನು ನಡೆಸಿಕೊಡುತ್ತಾರೆ. ಇದು ಸಣ್ಣಾಟದ ರೀತಿಯಲ್ಲಿ ಇದ್ದರೂ ಇದು ಪುರಾಣದ ಕಥೆಗಳನ್ನು ಆಧರಿಸಿರುತ್ತದೆ. ಇಲ್ಲಿ ರೌದ್ರ, ವೀರ, ಭಕ್ತಿ, ಹಾಸ್ಯ ಹೀಗೆ ಹಲವು ರಸಗಳಿಂದ ಕೂಡಿದ್ದು ಒಟ್ಟಾರೆಯಾಗಿ ರಸಭರಿತವಾಗಿರುತ್ತವೆ. ದೊಡ್ಡಾಟದುದ್ದಕ್ಕೂ ಹಾಡುಗಳೇ ಹೆಚ್ಚಾಗಿದ್ದು ಸಂಭಾಷಣೆ ಕಡಿಮೆಯಿರುತ್ತದೆ, ಮಾತುಗಳೂ ಸಹ ಹಾಡಿನ ರೂಪದಲ್ಲಿಯೇ ತುಂಬಾ ರಸಭರಿತವಾಗಿರುತ್ತವೆ. ಇದನ್ನು ಊರಿನ ಬಯಲಿನಲ್ಲಿ ಅಥವಾ ನಡುಊರಲ್ಲಿ ನಡೆಸಿಕೊಡುತ್ತಾರೆ. ಇದೇ ರೀತಿಯಾಗಿ ಇಂದು ಮನರಂಜನೆಯೆಲ್ಲವೂ ಸಿನಿಮಾಮಯವಾಗಿರುವುದರಿಂದ ಹಳ್ಳಿಗರೂ ಸಹ ಅತ್ಯಂತ ಕುತೂಹಲದಿಂದ ಸಿನಿಮಾಗಳನ್ನು ನೋಡುತ್ತಾರೆ. ಆದರೆ ಈ ರೀತಿಯ ಆಟಗಳಾದ ಬಯಲಾಟದ ಕಡೆ ಗಮನ ಹರಿಸುವುದಿಲ್ಲ. ಆದ್ದರಿಂದ ಇವರಲ್ಲಿಯೇ ಕೆಲವೊಂದು ಹಣಹೊಂದಿದ ಸಮುದಾಯ ಉತ್ತಮ ರೀತಿಯ ನಾಟಕ ಕಂಪನಿಗಳನ್ನು ರಚಿಸಿಕೊಂಡು ಹಲವಾರು ಕಡೆ ಪ್ರದರ್ಶನ ನೀಡುತ್ತಾರೆ.

ಇನ್ನು ಈ ರೀತಿಯ ಜನಪದ ಕಲೆಗಳನ್ನು ಬಿಟ್ಟರೆ ಶಿಳ್ಳೇಕ್ಯಾತರು ಕೆಲವು "ಸಂಗೀತ ವಾದ್ಯಗಳನ್ನು" ಬಳಸಿ ಹಾಡುಗಳನ್ನು ಹಾಡುವ ಕಲೆಯನ್ನು ರೂಢಿಸಿಕೊಂಡು ಬಂದಿದ್ದಾರೆ. ಉದಾಹರಣೆಗೆ ಮುಖವೀಣೆ, ಬುರ್‌ಬುರಿ, ತುಂತುಣಿ, ತಾಳಗಳು, ಮೃದಂಗ, ತಣಿಗೆ ಈ ರೀತಿಯ ವಾದ್ಯಗಳು ಸ್ವತಃ ಅವರೇ ಮರಗಳ ಸಹಾಯದಿಂದ ಇನ್ನೂ ಕೆಲವೊಂದು ಚರ್ಮದ ಸಹಾಯದಿಂದ ಅವುಗಳನ್ನು ತಯಾರಿಸಿ ಅವುಗಳನ್ನು ಬಾರಿಸುತ್ತಾ ಮನೆ-ಮನೆಗಳಿಗೂ ಹೋಗಿ ದೇವರ ಹಾಡುಗಳು, ದಾಸರ ಹಾಡುಗಳನ್ನು ಹಾಡುತ್ತಾ ದೇವರ ಹೆಸರಲ್ಲಿ ಭಿಕ್ಷಾಟನೆ ಮಾಡುತ್ತಾರೆ. ಇವರು ಮೂಲತಃ ರಾಮನ ಭಕ್ತರಾಗಿರುವುದರಿಂದ ರಾಮಾಯಣ ಮತ್ತು ಮಹಾಭಾರತದಲ್ಲಿ ಬರುವ ಕೆಲವೊಂದು ಶ್ಲೋಕಗಳನ್ನು ಹೇಳುತ್ತಾ ವಾದ್ಯಗಳನ್ನು ಬಾರಿಸುತ್ತಾ ಮನೆಯಿಂದ ಮನೆಗೆ ತಮ್ಮ ದಿನನಿತ್ಯದ ಕಾರ್ಯಕ್ಕೆ ತೆರಳುತ್ತಾರೆ.

ಶಿಳ್ಳೇಕ್ಯಾತ ಹೆಣ್ಣುಮಕ್ಕಳು ಹಲವಾರು ರೀತಿಯ "ಶೃಂಗಾರ ಕಲೆ"ಗಳನ್ನು ತಲಾತಲಾಂತರದಿಂದ ಬೆಳೆಸಿಕೊಂಡು ಬಂದಿದ್ದಾರೆ. ಅವರು ಹಚ್ಚೆ ಹಾಕುವುದು, ಮಡಿಕೆಗಳು ಮತ್ತು ಗೋಡೆಯ ಮೇಲೆ ಚಿತ್ರ ಬರೆಯುವುದು, ಹಣಿಕೆ ಹಾಕುವುದು, ಕಸೂತಿ ಹಾಕುವುದು ಹಾಗೂ ಕೌದಿ ಹೊಲಿಯುವುದು, ಚಾಪೆ ಹೆಣೆಯುವುದು ಹಾಗೂ ಮೆಹಂದಿ ಹಚ್ಚುವುದು ಹೀಗೆ ಅವರು ತಮ್ಮ ಪೂರ್ವಜರಿಂದ ಬಂದಂತಹ ಕಸುಬುಗಳನ್ನು ಮಾಡಿ ಮನೆ ಗಂಡಸರಿಗೆ ಆರ್ಥಿಕವಾಗಿ ಸಹಾಯ ಮಾಡುತ್ತಾರೆ.

ಒಟ್ಟಾರೆಯಾಗಿ ಹೇಳಬೇಕಾದರೆ ಶಿಳ್ಳೇಕ್ಯಾತರು ಇಂದಿಗೂ ನಮ್ಮ ಸಮಾಜಕ್ಕೆ ಜನಪದ ಕಲೆಗಳನ್ನು ಹಾಗೂ ಅದರ ಸೊಗಡನ್ನು ಜೀವಂತವಾಗಿಟ್ಟು ನಮ್ಮ ಜನಕ್ಕೆ, ಸಮಾಜಕ್ಕೆ ಮತ್ತು ಮುಂದಿನ ಪೀಳಿಗೆಗೆ ಅವುಗಳನ್ನು ಕಾಣಿಕೆಯಾಗಿ ಕೊಡುತ್ತಿದ್ದಾರೆ.

# ಅಧ್ಯಾಯ ಏಳು

# ಸಮಾರೋಪ

ಶಿಳ್ಳೇಕ್ಯಾತರ ಮೂಲದ ಬಗ್ಗೆ ಹೇಳುವುದಾದರೆ ಅವರು ಮೂಲತಃ ಮಹಾರಾಷ್ಟ್ರದಿಂದ ಬಂದಿರಬಹುದೆಂದು ಅವರ ಸಮಗ್ರ ಅಧ್ಯಯನದಿಂದ ತಿಳಿದುಬರುತ್ತದೆ. ಆದರೆ ಏಕಲವ್ಯ ನಗರದಲ್ಲಿ ವಾಸಿಸುವ ಈ ಒಂದು ಸಮುದಾಯವನ್ನು ಕುರಿತು ಹೇಳುವುದಾದರೆ ಇವರು ಮೂಲತಃ ಆಂಧ್ರಪ್ರದೇಶ, ತಮಿಳುನಾಡು ಹಾಗೂ ಕೆಲವೊಂದು ಕುಟುಂಬ ಮಹಾರಾಷ್ಟ್ರದವರಾಗಿದ್ದು, ಅವರು ಏಕಲವ್ಯ ನಗರದಲ್ಲಿ ಸುಮಾರು ಇಪ್ಪತ್ತೈದು ವರ್ಷದಿಂದ ವಾಸವಾಗಿದ್ದಾರೆ. ಅವರ ಸಂಸ್ಕೃತಿಯ ಬಗ್ಗೆ ಹೇಳುವುದಾದರೆ, ಇವರು ಸಹ ನಗರ ಪ್ರದೇಶದ ಜನರ ಹಾಗೆ ಹಬ್ಬ-ಹರಿದಿನಗಳನ್ನು ಆಚರಿಸುತ್ತಾರೆ. ಆದರೆ ಕೆಲವೊಂದು ನೀತಿ-ನಿಯಮಗಳನ್ನು ತಮ್ಮ ಪೂರ್ವಜರಂತೆ ಅವರು ಆಚರಿಸುವುದು ಕಂಡುಬರುತ್ತದೆ. ಕಾರಣ ಅವರಲ್ಲಿರುವ ಹಿರಿಯರು ತಮ್ಮ ಮಕ್ಕಳಿಗೆ ಹೇಳಿಕೊಡುವುದರಿಂದ ತಮ್ಮ ಪರಂಪರಾಗತವಾಗಿ ಬಂದಂತಹ ಆಚರಣೆಗಳು ಇನ್ನೂ ಸ್ವಲ್ಪಮಟ್ಟಿಗೆ ಕಂಡುಬರುತ್ತಿವೆ. ಆದರೆ ಅವರು ನಗರ ಸಂಸ್ಕೃತಿಗೆ ತುಂಬಾ ಹತ್ತಿರವಿರುವುದರಿಂದ ಅವರ ವೇಷ-ಭೂಷಣ, ಆಚರಣೆಗಳು ನಗರ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿರುವುದು ಗಮನಾರ್ಹ.

ಶಿಳ್ಳೇಕ್ಯಾತರಲ್ಲಿ ಒಟ್ಟು ಹದಿನಾಲ್ಕು ಉಪಜಾತಿಗಳಿದ್ದು ಅವುಗಳನ್ನು ಬೆಡಗುಗಳು ಎಂದು ಕರೆಯುತ್ತಾರೆ. ಒಂದೆ ಬೆಡಗಿನವರ ಸಂಗಡ ಯಾವುದೇ ಮದುವೆ ಸಂಬಂಧಗಳು ಇರುವುದಿಲ್ಲ ಕಾರಣ ಒಂದೆ ಬೆಡಗಿನವರು ಅಣ್ಣ-ತಮ್ಮಂದಿರಂತೆ ಕಾಣುವ ಸಂಪ್ರದಾಯ ಇಂದಿಗೂ ಇದೆ. ಏಕಲವ್ಯ ನಗರದಲ್ಲಿ ಶಿಳ್ಳೇಕ್ಯಾತರ ಒಟ್ಟು ಸುಮಾರು ಎರಡುನೂರಾ ಐವತ್ತೈದು ಕುಟುಂಬಗಳು ವಾಸವಾಗಿದ್ದು ಅದರಲ್ಲಿ ಕೆಲವೊಂದು ಕುಟುಂಬಗಳು ಮಾತ್ರ ಗುಳೆ ಹೋಗುವುದನ್ನು ಕಂಡುಬರುತ್ತದೆ. ಆದರೆ ಉಳಿದೆಲ್ಲ ಕುಟುಂಬಗಳು ಏಕಲವ್ಯ ನಗರದಲ್ಲಿಯೇ ಇದ್ದು ಅಕ್ಕ-ಪಕ್ಕದ ನಗರಗಳಲ್ಲೂ ಗಾರೆಕೆಲಸ, ಕಾರ್ಖಾನೆಗಳಲ್ಲಿ ಕೂಲಿ ಕೆಲಸ ಮಾಡಿಕೊಂಡು ಸಂಸಾರ ನಡೆಸುತ್ತಾರೆ. ಈ ಜನಾಂಗದ ಹಲವು ಕುಟುಂಬಗಳು ಒಂದೇ ಕಡೆ ನೆಲೆಸಿ ಜೀವನ ನಡೆಸುತ್ತಿರುವುದು ಒಂದು ವಿಶೇಷ.

ಏಕಲವ್ಯ ನಗರದ ನಿವಾಸಿಗಳಾದ ಶಿಳ್ಳೇಕ್ಯಾತರು ತಮ್ಮದೇ ಆದ ಒಂದು ಸಾಮಾಜಿಕ ವ್ಯವಸ್ಥೆ ಹೊಂದಿದ್ದಾರೆ. ಮೊದಲಿನ ರೀತಿಯಲ್ಲಿ ಇಂದು ನ್ಯಾಯ-ಪಂಚಾಯಿತಿ ನಡೆಯುವುದು ಸ್ವಲ್ಪ ಕಷ್ಟ, ಕೆಲವೊಂದು ವಿಚಾರಗಳಲ್ಲಿ ಹಿರಿಯರ ಮತ್ತು ಕುಲಗುರುಗಳ ಮಾತನ್ನು ಕೇಳುತ್ತಾರೆ. ಆದರೂ ಸಹ ಕಡಿಮೆ ಪ್ರಮಾಣದಲ್ಲಿರುವುದನ್ನು ಇಲ್ಲಿ ನಾವು ಗಮನಿಸಬೇಕಾಗಿದೆ. ಅವರ ಕುಲಗಳಲ್ಲಿ ಕುಲಪಂಚಾಯಿತಿ ಇದ್ದರೂ, ಇಂದು ನಗರ ಪ್ರದೇಶದ ನಿವಾಸಿಗಳಾದ ಈ ಶಿಳ್ಳೇಕ್ಯಾತ ಜನಾಂಗ ರಾಜಕೀಯ ಪ್ರಭಾವಕ್ಕೆ ಒಳಗಾಗಿದ್ದಾರೆ. ಇವರಲ್ಲಿಯೇ ಒಬ್ಬನನ್ನು ಪಟ್ಟಣ ಪಂಚಾಯಿತಿಗೆ ಚುನಾಯಿಸಿ ಕಳುಹಿಸಿರುವುದರಿಂದ ಅವನ ಮಾತಿಗೆ ಹೆಚ್ಚಿನ ಮಾನ್ಯತೆ ದೊರೆಯುತ್ತಿದೆ. ಯಾವುದೇ ರೀತಿಯ ಸಮಸ್ಯೆಗಳಿದ್ದರೂ ಅವುಗಳು ಅವನಲ್ಲಿಯೇ ಇತ್ಯರ್ಥವಾಗುತ್ತವೆ.

ಇನ್ನೂ ಅವರ ಜನಪದ ವೈದ್ಯದ ಬಗ್ಗೆ ಮಾತಾಡುವುದಾದರೆ, ಅಲ್ಲಿರುವ ಹಿರಿಯರಲ್ಲಿ ಇದರ ಬಗ್ಗೆ ಆಳವಾದ ಜ್ಞಾನವಿರುವುದು ಕಾಣುತ್ತೇವೆ. ಆದರೆ ಈ ತಲೆಮಾರಿನ ಯಾವುದೇ ವ್ಯಕ್ತಿಗಳಲ್ಲಿ ಆ ಗುಣ ಜ್ಞಾನವಿರುವುದನ್ನು ಕಂಡುಬಂದಿಲ್ಲ. ಕಾರಣ ಸರಕಾರದ ವತಿಯಿಂದ ನೇಮಕಗೊಂಡಂತಹ ಹಾಗೂ ಸರ್ಕಾರೇತರ ಸಂಸ್ಥೆಗಳಿಂದ ನೇಮಕವಾದ ವೈದ್ಯರು ಅಲ್ಲಿಗೆ ಭೇಟಿಕೊಡುವುದರಿಂದ ಹಾಗೂ ಹತ್ತಿರದಲ್ಲಿಯೇ ಸರಕಾರಿ ಆಸ್ಪತ್ರೆಗಳಿರುವುದರಿಂದ ಅವರಲ್ಲಿರುವ ಪ್ರತಿಯೊಬ್ಬ ವ್ಯಕ್ತಿಯೂ ಅಲ್ಲಿನ ನಾಟಿ ವೈದ್ಯಕ್ಕೆ ಹೋಗದೆ ಸರಕಾರಿ ಆಸ್ಪತ್ರೆಗೆ ಬರುತ್ತಾರೆ. ಅದರಲ್ಲಿಯೂ ಕೆಲವೊಬ್ಬರು ಸಣ್ಣ-ಪುಟ್ಟ ಕಾಯಿಲೆಗಳಿಗೆ ತಾವೇ ತಯಾರಿಸಿದ ನಾಟಿ ವೈದ್ಯವನ್ನು ತೆಗೆದುಕೊಳ್ಳುತ್ತಾರೆ. ಒಂದೇ ಮಾತಲ್ಲಿ ಹೇಳುವುದಾದರೆ ಇವರು ಸಂಪೂರ್ಣವಾಗಿ ಸರಕಾರಿ ಆಸ್ಪತ್ರೆಯ ಲಾಭವನ್ನು ಪಡೆದುಕೊಳ್ಳುತ್ತಿದ್ದಾರೆ.

ಈ ಶಿಳ್ಳೇಕ್ಯಾತರು ಕಾಡಿನಿಂದ ನಾಡಿಗೆ ಬಂದಿರುವುದರಿಂದ ಅವರನ್ನು ಕೆಲವೊಂದು ಆಚಾರ-ವಿಚಾರ ನಂಬಿಕೆಗಳು ಬಿಟ್ಟಿಲ್ಲ. ಇನ್ನೂ ಅವರು ಖಾಯಿಲೆ ಬಿದ್ದಾಗ ಮಾಟ-ಮಂತ್ರ, ಚೀಟಿ, ದೇವರ ಹರಕೆಯೆಂದು ಹಲವು ರೀತಿಯ ಮೂಢನಂಬಿಕೆಗಳನ್ನು ಆಚರಿಸುವುದು ಮತ್ತು ಪಾಲಿಸುವುದು ಕಂಡುಬರುತ್ತದೆ.

ಏಕಲವ್ಯ ನಗರದ ಚಿತ್ರಣವನ್ನು ನೋಡಿದರೆ ಅದು ಒಂದು ನಗರ ಪ್ರದೇಶವೆಂದು ಯಾರೂ ಹೇಳುವುದಿಲ್ಲ. ಏಕಲವ್ಯ ನಗರದ ಅಕ್ಕಪಕ್ಕದಲ್ಲಿ ಒಳ್ಳೆಯ ಕಟ್ಟಡಗಳು ತಲೆ ಎತ್ತಿ ನಿಂತರೂ ಅವರ ಮನೆಗಳು ಮಾತ್ರ ಅದೇ ತೆಂಗಿನ ಗರಿಯ ಗುಡಿಸಿಲು. ಚಳಿಗಾಲ ಮತ್ತು ಮಳೆಗಾಲದಲ್ಲಿ ಅವರ ಜೀವನ ಪ್ರಾಣಿಗಳಿಗಿಂತಲೂ ಕಡೆ ಎಂದೆನಿಸುತ್ತದೆ. ಅವರ ಜೀವನ ಪದ್ಧತಿ ನೊಡಿದರೆ ಪ್ರತಿಯೊಬ್ಬ ಹೃದಯವಂತ

ಮನುಷ್ಯನಿಗೆ ವ್ಯಕ್ತಿಯ ಕರಳು ಕಿತ್ತುಬರುತ್ತದೆ. ಅವರಿಗೆ ಯಾವುದೇ ಆಸ್ತಿ ಅಂತಸ್ತು ಇಲ್ಲ. ಅದೇ ಗಾರೆ ಕೆಲಸ, ಭಿಕ್ಷಾಟನೆ. ಇದರಿಂದಲೇ ಇವರ ನಿತ್ಯ ಜೀವನ ಹೀಗಿರುವುದರಿಂದ ಅವರ ಆರ್ಥಿಕ ಬದುಕು ತುಂಬಾ ಹೀನಾಯಮಾನವಾಗಿದೆ. ಒಂದು ಹೊತ್ತಿನ ಊಟಕ್ಕೂ ವಿಚಾರ ಮಾಡುವಂತಹ ಸಂದರ್ಭ ದಿನವಿಡಿ ಒದಗಿಬರುತ್ತದೆ. ಒಂದು ಹೊತ್ತು ಊಟವಿಲ್ಲದೆ ಕಳೆಯುವ ಹಲವಾರು ಕುಟುಂಬಗಳು ಇಲ್ಲಿ ಸಾಮಾನ್ಯವಾಗಿ ಕಂಡುಬರುತ್ತವೆ.

ಇವರ ಮೂಲಕಸುಬಾದ ತೊಗಲುಗೊಂಬೆಯಾಟ ಈಗ ಇಲ್ಲಿ ಯಾರಿಗೂ ತಿಳಿದಿಲ್ಲ. ಕೆಲವೊಂದು ಕುಟುಂಬಗಳಿಗೆ ಬಯಲಾಟದ ಬಗ್ಗೆ ಜ್ಞಾನವಿದ್ದರೂ ಅದನ್ನು ನೋಡುವವರು ಯಾರೂ ಇಲ್ಲ. ಆದ್ದರಿಂದ ತೊಂಬತ್ತು ಪ್ರತಿಶತ ಕುಟುಂಬಗಳು ಇಲ್ಲಿ ಕಾರ್ಖಾನೆಯಲ್ಲಿ ದಿನಗೂಲಿಯಾಗಿ ಹಾಗೂ ಗಾರೆ ಕೆಲಸದಲ್ಲಿ ತೊಡಗಿದ್ದಾರೆ. ಇನ್ನು ಮಕ್ಕಳು, ಮುದುಕರು ಭಿಕ್ಷಾಟನೆಯನ್ನು ತಮ್ಮ ಉಪಜೀವನಕ್ಕೆ ಮಾಡಿಕೊಂಡಿದ್ದಾರೆ. ಇಂತಹ ಸನ್ನಿವೇಶವಿರುವುದರಿಂದಲೇ ಅವರಿಗೆ ಅಂದಿನ ಕೂಲಿ, ಅಂದಿನ ಊಟ, ಹೀಗಿರುವುದರಿಂದ ಅವರಿಗೆ ಮನೆ ಕಟ್ಟಲು ಆಗುವುದಿಲ್ಲ. ಆದ್ದರಿಂದ ಅವರು ಇಪ್ಪತ್ತೈದು ವರ್ಷದಿಂದ ಹಿಂದಿನ ಗುಡಿಸಲಿನಲ್ಲಿಯೇ ಜೀವನವನ್ನು ಸಾಗಿಸುತ್ತಿದ್ದಾರೆ. ಮಳೆಗಾಲದಲ್ಲಿ ಮಾತ್ರ ಆ ಗುಡಿಸಲುಗಳಿಗೆ ಪ್ಲಾಸ್ಟಿಕ್ ಹೊದಿಸಿರುವುದು ಕಂಡುಬರುತ್ತದೆ. ಈ ರೀತಿಯಾದ ಜೀವನವಿರುವುದರಿಂದ ಮತ್ತು ನಗರ ಜೀವನಕ್ಕೆ ಸ್ಥಾನಪಲ್ಲಟಗೊಂಡಿರುವುದರಿಂದ ಅವರ ಕಸುಬನ್ನು ಮರೆತು ಹೊಸ ಜೀವನಕ್ಕೆ ಒಗ್ಗದೆ ಹಳೆ ಜೀವನಕ್ಕೆ ಬಗ್ಗದೆ ತಮ್ಮದೇ ಆದ ಒಂದು ಹರಕು-ಮುರುಕಿನ ನಾಗರೀಕತೆಯಲ್ಲಿ ಜೀವನವನ್ನು ಕಳೆಯುತ್ತಿದ್ದಾರೆ. ನಗರವಾಸಿಗಳ ಹಳೆಯ ಬಟ್ಟೆಗಳನ್ನು ಧರಿಸಿಕೊಂಡು ಅಂತರಾಳದಲ್ಲಿರುವ ನೋವಿಗೆ ಹಳೆಯಬಟ್ಟೆಗಳ ಹೊದಿಕೆಯನ್ನು ಹಾಕಿಕೊಂಡು, ಆ ಕಡೆ ನಗದೆ ಈ ಕಡೆ ಅಳದೇ ಎರಡರ ಮಧ್ಯ ಮೌನದಿಂದ ಜೀವನ ನಡೆಸುತ್ತಿದ್ದಾರೆ.

ಶಿಳ್ಳೇಕ್ಯಾತರ ಭಾಷೆ ಮತ್ತು ಸಾಹಿತ್ಯದ ಬಗ್ಗೆ ಹೇಳುವುದಾದರೆ ತುಂಬಾ ಶ್ರೀಮಂತವಾದದ್ದು. ಆದರೆ ಇಂದು ಅವರು ತಮ್ಮ ಪೂರ್ವಜರ ಭಾಷೆಯನ್ನು ಮಾತಾಡುತ್ತಾರೆ. ಇವರು ಪಂಚಭಾಷೆ ಪಂಡಿತರು ಆದರೆ ಅದೇ ಹಳೆಯ ಹರಕು-ಮುರುಕು ಹಾಡುಗಳನ್ನು ಹಾಡಿಕೊಂಡು ಭಿಕ್ಷಾಟನೆ ಮಾಡುತ್ತಾರೆ. ಅದನ್ನು ಬಿಟ್ಟರೆ ಸಿನಿಮಾ ಹಾಡುಗಳು ಮತ್ತು ಅಲ್ಲಿರುವ ನಗೆಚಟಾಕಿಗಳನ್ನು ತೆಗೆದುಕೊಂಡು ತಮ್ಮದೇ ಆದ ಶೈಲಿಯಲ್ಲಿ ತಮ್ಮಲ್ಲಿರುವ ದುಃಖವನ್ನು ಅದುಮಿಕೊಂಡು ಜನರನ್ನು ನಗಿಸುವ ಪ್ರಯತ್ನ ಮಾಡುತ್ತಾರೆ.

ಇಂದು ಮನೆ-ಮನೆಯಲ್ಲಿ ಟಿ.ವಿ.ಇರುವುದರಿಂದ ಇವರ ಆ ಹಾಡು, ಕೀರ್ತನೆ, ಬಯಲಾಟ ನೋಡುವವರು ತುಂಬಾ ಕಡಿಮೆಯಾಗಿರುವುದರಿಂದ ಇವರು ತಮ್ಮ ಕಥೆ, ನಾಟಕ, ಲಾವಣಿ, ಗಾದೆಗಳು, ಒಗಟುಗಳು ಎಲ್ಲವನ್ನು ಬಿಟ್ಟು ನಗರ ಜೀವನಕ್ಕೆ ಮೈಯೊಡ್ಡಿ ಬದುಕುತ್ತಿದ್ದಾರೆ. ಹೀಗಿರುವುದರಿಂದ ಸ್ವತಃ ಅವರೇ ತಮ್ಮ ಅಮೂಲ್ಯವಾದ ಜನಪದ ಕಲೆ, ಸಾಹಿತ್ಯ ಎಲ್ಲವನ್ನೂ ಮರೆತು ಒಂದು ರೀತಿಯಲ್ಲಿ ಬರಡು ಜೀವನ ನಡೆಸುತ್ತಿದ್ದಾರೆ.

ಒಟ್ಟಾರೆ ಶಿಳ್ಳೆಕ್ಯಾತರ ಮೂಲ, ಸಂಸ್ಕೃತಿ, ಅವರ ಸಾಮಾಜಿಕ ಜೀವನ, ನಂಬಿಕೆ, ಅವರ ಆರ್ಥಿಕ ಮತ್ತು ಸಾಂಸ್ಕೃತಿಕ ಜೀವನ, ಭಾಷೆ ಮತ್ತು ಸಾಹಿತ್ಯ ಎಲ್ಲವೂ ನಗರ ಜೀವನಕ್ಕೆ ಹೆದರಿ ನವ್ಯಸಂಸ್ಕೃತಿಯ ಬಲೆಯಲ್ಲಿ ಬಳಲಾಡುತ್ತಿದೆ. ಇಂದು ಅವರ ಸಾಂಸ್ಕೃತಿಕ ಮತ್ತು ಸಾಮಾಜಿಕ ರೀತಿ-ನೀತಿಗಳು ನೆಲೆಯನ್ನು ಕಳೆದುಕೊಂಡಿವೆ. ಇದು ಸಂಪೂರ್ಣವಾಗಿ ನಗರಜೀವನ ಶೈಲಿಯಲ್ಲಿ ವಿಲೀನಗೊಂಡಿವೆ. ಅವರು ಮೂಲ ಸಂಸ್ಕೃತಿ ಮತ್ತು ತಮ್ಮ ಜನಪದ ಸಾಹಿತ್ಯ ಮರೆತು ನಗರ ಸಂಸ್ಕೃತಿಗೆ ಸ್ಥಾನಪಲ್ಲಟಗೊಂಡಿದ್ದಾರೆ. ಜನರು ಸಿನಿಮಾ ಪ್ರಪಂಚದಲ್ಲಿ ತೇಲಾಡುತ್ತಿರುವುದರಿಂದ ಜನಪದ ಕಲೆ ಮತ್ತು ಸಂಸ್ಕೃತಿಯನ್ನು ಇವರು ಮರೆತು ಹೋಗಿರುವುದನ್ನು ನಾವು ಈ ಜನಾಂಗದಲ್ಲಿ ಗುರುತಿಸಬಹುದಾಗಿದೆ.

# ಪರಾಮರ್ಶನ ಗ್ರಂಥಗಳು


೧. ರಾಜಪ್ಪ ದಳವಾಯಿ (೨೦೧೦), ಕನ್ನಡ ಸಾಹಿತ್ಯ ಕೋಶ, ದಳವಾಯಿ ಪ್ರಕಾಶನ, ಬೆಂಗಳೂರು.

೨. ಜೀ.ಶಂ. ಪರಮಶಿವಯ್ಯ (೨೦೧೨), ಜಾನಪದ ಕೆಲವು ಮುಖಗಳು (ಜನಪದ ಬರಹ ಸಂಪುಟ–೨), ಸಾಗರಪ್ರಕಾಶನ, ಬೆಂಗಳೂರು.

೩. ಪ್ರೊ. ಹಿ.ಶಿ.ರಾಮಚಂದ್ರೇಗೌಡ ಮತ್ತು ಡಾ. ಚಕ್ಕರೆ ಶಿವಶಂಕರ್ (೨೦೦೩), ಜಾನಪದ ತಲೆಮಾರು–೧, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೪. ಕುಪ್ಪೆನಾಗರಾಜ (೨೦೧೩), ಅಲೆಮಾರಿಯ ಅಂತರಂಗ, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್, ಬೆಂಗಳೂರು.

೫. ಡಾ. ಸಣ್ಣವೀರ ದೊಡ್ಡಮನಿ ಮತ್ತು ಪಿ.ಮಹೇಂದರ್‌ರಾವ್ ಸಾಸನೀಕ್ (೨೦೦೮). ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆ, ಶಿಳ್ಳೇಕ್ಯಾತ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೬. ಶಿವಕುಮಾರ್ ಕಂಪ್ಲಿ (ಜೂನ್ ೨೫, ೨೦೧೩), ಮೂಲೆಗುಂಪಾದ ಶಿಳ್ಳೆಕ್ಯಾತ, ಪ್ರಜಾವಾಣಿ, ಪುಟ. ii, ಕನ್ನಡ ದಿನಪತ್ರಿಕೆ, ಮೈಸೂರು.

೭. ಎಸ್.ಜಿ.ಮೋರಬ್ (), ದಿ ಶಿಳ್ಳೆಕ್ಯಾತ ನೋಮ್ಯಾಡಿಕ್ ಫೋಕ್ ಆರ್ಟಿಸ್ಟ್ ಆಫ್ ನಾರ್ಥನ್ ಮೈಸೂರು, ಅಂಥರೋಪೋಲೋಜಿಕಲ್ ಸರ್ವೆ ಆಫ್ ಇಂಡಿಯಾ, ಕಲ್ಕತ್ತಾ.

೮. ಪಿ.ಕೆ.ಮಿಶ್ರಾ ಮತ್ತು ಸಿ.ಆರ್.ರಾಜಲಕ್ಷ್ಮೀ (೧೯೭೧) ನೋಮ್ಯಾಡ್ಸ್ ಇನ್ ಮೈಸೂರು ಸಿಟಿ, ಆಂಥರೋಪೋಲೋಜಿಕಲ್ ಸರ್ವೆ ಆಫ್ ಇಂಡಿಯಾ, ಕಲ್ಕತ್ತಾ.

೯. ಗೆಜೆಟಡ್ ಆಫ್ ಬಾಂಬೆ ಪ್ರೆಸಿಡೆನ್ಸಿ (೧೮೮೮), ಪುನಾ ಡಿಸ್ಟ್ರಿಕ್ಟ್, ಭಾಗ I, ಸಂಪುಟ XVIII, ಗೌರ್ನ್‌ಮೆಂಟ್ ಸೆಂಟ್ರಲ್ ಪ್ರೆಸ್, ಬಾಂಬೆ.

೧೦. ಗೆಜೆಟೆಡ್ ಆಫ್ ಬಾಂಬೆ ಪ್ರೆಸಿಡೆನ್ಸಿ (೧೮೮೮) ಬೆಳಗಾಂ ಜಿಲ್ಲೆ, ಸಂಪುಟ XXI, ಸರಕಾರಿ ಕೇಂದ್ರ ಮುದ್ರಣಾಲಯ, ಬಾಂಬೆ.

೧೧. ಗೆಜೆಟೆಡ್ ಆಫ್ ಬಾಂಬೆ ಪ್ರೆಸಿಡೆನ್ಸಿ (೧೮೮೮) ಧಾರವಾಡ ಜಿಲ್ಲೆ, ಸಂಪುಟ XXII, ಸರಕಾರಿ ಕೇಂದ್ರ ಮುದ್ರಣಾಲಯ, ಬಾಂಬೆ.

೧೨. ಗೆಜೆಟೆಡ್ ಆಫ್ ಬಾಂಬೆ ಪ್ರೆಸಿಡೆನ್ಸಿ (೧೮೮೮) ಬಿಜಾಪುರ ಜಿಲ್ಲೆ, ಸಂಪುಟ XXII, ಸರಕಾರಿ ಕೇಂದ್ರ ಮುದ್ರಣಾಲಯ, ಬಾಂಬೆ.

೧೩. ಜನಸಂಖ್ಯೆಯ ವಿವರ, ಸಮಾಜ ಕಲ್ಯಾಣ ಇಲಾಖೆ ಮತ್ತು ಶಾಲಾದಾಖಲಾತಿ ಪುಸ್ತಕ, ಮೈಸೂರು, ೨೦೧೨.

